# ಬ್ಯಾಂಕಿಂಗ್ ಪ್ರಪಂಚ

ಸಂಪಾದಕರು
ಎಚ್ಚೆಸ್ಕೆ

ಸಂಪುಟ ೧೦
ಸಂಚಿಕೆ ೪

ಡಿಸೆಂಬರ್
೧೯೮೯

## ಈ ಸಂಚಿಕೆಯಲ್ಲಿ



ಸಮನ್ವಯ ಸಮಿತಿ (ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)
ಭಾರತೀಯ ಸ್ಟೇಟ್ ಬ್ಯಾಂಕ್, ನಂ. ೨೨ ಜಯಚಾಮರಾಜೇಂದ್ರ ರಸ್ತೆ, ಬೆಂಗಳೂರು ೫೬೦ ೦೦೨

ಹಣ ಬ್ಯಾಂಕಿಂಗ್ ವಿಚಾರಗಳಿಗೆ ಮೀಸಲಾದ ತ್ರೈಮಾಸಿಕ

ಕರ್ನಾಟಕ ಸರ್ಕಾರ

# ಕರ್ನಾಟಕ ರಾಜ್ಯೋತ್ಸವ ಶುಭಾಶಯಗಳು

ಕರ್ನಾಟಕ ಎಂಬುದು ಒಂದು ಬರಿಯ ಹೆಸರಲ್ಲ. ಕರ್ನಾಟಕ ಎಂದೊಡನೆಯೇ ಒಬ್ಬೊಬ್ಬರಲ್ಲಿ ಒಂದೊಂದು ಭಾವನೆ ಸ್ಫುರಿಸುವುದು ಸಹಜ. ಕರ್ನಾಟಕದ ಇತಿಹಾಸ ಸುದೀರ್ಘವಾದುದು. ಇದು ಶಂಕರಾಚಾರ್ಯ, ಬಸವಣ್ಣ, ಮಧ್ವಾಚಾರ್ಯ, ರಾಮಾನುಜಾಚಾರ್ಯ ಮತ್ತಿತರ ಮಹಾಮಹಿಮರ ಬೀಡು, ದೇಶದಾದ್ಯಂತ ಪಸರಿಸಿರುವ ಅವರ ಸಂದೇಶಗಳು ಇಂದಿಗೂ ಮಾನ್ಯವಾಗಿವೆ. ಚಾಲುಕ್ಯ, ಹೊಯ್ಸಳ ಹಾಗೂ ವಿಜಯನಗರ ಗಳಂತಹ ಮಹೋನ್ನತ ಸಾಮ್ರಾಜ್ಯಗಳು ಇಲ್ಲಿ ಉದಿಸಿ, ದೇಶದ ನಾಗರೀಕತೆ ಹಾಗೂ ಸಾಂಸ್ಕೃತಿಕ ಪರಂಪರೆಗಳ ಮೇಲೆ ತಮ್ಮ ಅಚ್ಚಳಿಯದ ಪ್ರಭಾವವನ್ನು ಬೀರಿವೆ. ಜೀವನದಿಗಳಾದ ಕಾವೇರಿ, ಕೃಷ್ಣ ಹಾಗೂ ತುಂಗ ಭದ್ರೆಯರು ರಾಜ್ಯದ 'ಜೀವನಕ್ಕೆ ನೆಮ್ಮದಿ ತಂದಿವೆ. ಪ್ರಕೃತಿ ಕರುಣಿಸಿದ ಸೌಂದರ್ಯದ ಬೀಡು—ಕರ್ನಾಟಕ. ಇಲ್ಲಿನ ಗಂಧದ ಸುವಾಸನೆ ಹಾಗೂ ರೇಷ್ಮೆಯ ಹೊಳಪು ವಿಶ್ವಪ್ರಸಿದ್ಧಿ ಪಡೆದಿದೆ. ರಾಜ್ಯದ ಜನರು ಮೃದು ಸ್ವಭಾವಿಗಳು ಹಾಗೂ ಸಂಯಮ ಶೀಲರು. ದೇಶದ ಅತ್ಯಂತ ಪ್ರಾಚೀನ ಭಾಷೆಗಳಲ್ಲೊಂದಾದ ಕನ್ನಡ ಭಾಷೆಯೊಂದಿಗೆ ತುಳು, ಕೊಂಕಣಿ ಹಾಗೂ ಕೊಡವ ಭಾಷಾ ಸಂಪತ್ತು ರಾಜ್ಯದ ಹಿರಿಮೆಯಾಗಿದೆ.

ಮೈಸೂರಿನ ಒಡೆಯರ ಆಳ್ವಿಕೆಯಲ್ಲಿ ಅತ್ಯುತ್ತಮವಾದ ಆಡಳಿತ ಪದ್ಧತಿ ಅನುಷ್ಠಾನಕ್ಕೆ ಬಂದಿತು. ಇಂತಹ ಉತ್ತಮ ವಾತಾವರಣದಲ್ಲಿ ಸರ್. ಎಂ. ವಿಶ್ವೇಶ್ವರಯ್ಯನವರು ರಾಜ್ಯವನ್ನು ತಾಂತ್ರಿಕ ಸಾಧನೆಯ ಶಿಖರಕ್ಕೆ ಕೊಂಡೊಯ್ದರು. 1956ರ ನವೆಂಬರ್ ಒಂದರಂದು ರಾಜ್ಯ ಪುನರ್ ವಿಂಗಡಣೆಯಾದ ನಂತರ, ಕರ್ನಾಟಕ ವಿವಿಧ ಕ್ಷೇತ್ರಗಳಲ್ಲಿ ಗಣನೀಯ ಪ್ರಗತಿ ಸಾಧಿಸಿದೆ. ಕುಡಿಯುವ ನೀರಿನ ಪೂರೈಕೆ ಹಾಗೂ ವಿದ್ಯುಚ್ಛಕ್ತಿ ಸೌಲಭ್ಯ ರಾಜ್ಯದ ಎಲ್ಲಾ ಹಳ್ಳಿಗಳಿಗೂ ದೊರೆತಿದೆ. ಆರೋಗ್ಯ, ವಯಸ್ಕರ ಶಿಕ್ಷಣ, ಕೃಷಿ, ಕೈಗಾರಿಕೆ, ಪರಿಸರ ಸಂರಕ್ಷಣೆ, ಪರಿಶಿಷ್ಟಜಾತಿ ಹಾಗೂ ಬುಡಕಟ್ಟು ಜನಾಂಗ ಮತ್ತು ಇತರ ಹಿಂದುಳಿದ ವರ್ಗಗಳ ಅಭಿವೃದ್ಧಿಗೆ ಹಲವು ವಿಶಿಷ್ಟ ಯೋಜನೆಗಳನ್ನು ಕಾರ್ಯಗತಗೊಳಿಸಲಾಗುತ್ತಿದೆ. ದೇಶದ ಪ್ರಗತಿ ವಾಹಿನಿಗೆ ಮಹತ್ತರ ಕೊಡುಗೆ ನೀಡುತ್ತಿರುವ ಕರ್ನಾಟಕ ಹಲವು ವಿಧದಲ್ಲಿ ಒಂದು ಮಾದರಿ ರಾಜ್ಯವಾಗಿದೆ.

ಕರ್ನಾಟಕ ರಾಜ್ಯೋತ್ಸವದ ಈ ಶುಭ ಸಂದರ್ಭದಲ್ಲಿ ಕರ್ನಾಟಕದ ಸಮಸ್ತ ಜನರಿಗೂ ನನ್ನ ಹಾರ್ದಿಕ ಶುಭಾಶಯಗಳು. ಕರ್ನಾಟಕ ರಾಜ್ಯ ಮುಂಬರುವ ವರ್ಷಗಳಲ್ಲಿ ಇನ್ನೂ ಹೆಚ್ಚಿನ ಸಂಪದಭಿವೃದ್ಧಿ ಹೊಂದ ಲೆಂದು ಹಾರೈಸುತ್ತೇನೆ.

ಪಿ. ವೆಂಕಟಸುಬ್ಬಯ್ಯ
ರಾಜ್ಯಪಾಲರು

'ಕರ್ನಾಟಕ ವಾರ್ತೆ'

# ಬ್ಯಾಂಕಿಂಗ್ ಪ್ರಪಂಚ

ಸಂಪುಟ ೧೦ ಡಿಸೆಂಬರ್ ೧೯೮೯ ಸಂಚಿಕೆ ೪



ವಾರ್ಷಿಕ ಚಂದಾ : ರೂ. 15
ಆಜೀವ ಚಂದಾ : ರೂ. 150

## ಸಂಪಾದಕೀಯ

# ಹತ್ತು ಸಂಪುಟ

ಈ ಸಂಚಿಕೆಯೊಂದಿಗೆ 'ಬ್ಯಾಂಕಿಂಗ್ ಪ್ರಪಂಚ' ಹತ್ತು ಸಂಪುಟಗಳನ್ನು ಮುಗಿಸುತ್ತಿದೆ. 'ಬ್ಯಾಂಕಿಂಗ್ ಪ್ರಪಂಚ'ದ ಮೊದಲ ಸಂಚಿಕೆಯು ಬಿಡುಗಡೆಯಾದದ್ದು 1980ರ ಜೂನ್ ತಿಂಗಳಿನಲ್ಲಿ. ಆದ್ದರಿಂದ ಮುಂದಿನ ವರ್ಷದ ಜೂನ್‌ನಲ್ಲಿ ಅದು ವಾಸ್ತವವಾಗಿ ಹನ್ನೊಂದನೆಯ ವರ್ಷದಲ್ಲಿ ಕಾಲಿಡುತ್ತದೆಯೆನ್ನಬಹುದು. ಆದರೆ ನಮ್ಮ ಎಣಿಕೆ ಚಾಂದ್ರ ಅಥವಾ ಸೌರಮಾಸಗಳನ್ನು ಅವಲಂಬಿಸಿದ್ದಲ್ಲ. ಈ ಹತ್ತು ವರ್ಷಗಳಲ್ಲಿ ಒಂದೆರಡು ಬಾರಿ ನಾವು ಸಂಚಿಕೆಗಳ ಪ್ರಕಟನೆಯ ಮಾಸಗಳನ್ನು ಬದಲಾಯಿಸಿದ್ದೇವೆ. ಅರ್ಧವಾರ್ಷಿಕವಾಗಿ ಆರಂಭವಾದ ಪತ್ರಿಕೆ 1986ರಲ್ಲಿ ತ್ರೈಮಾಸಿಕವಾಯಿತು. ಅದರ ಪರಿಣಾಮವಾಗಿ ಪತ್ರಿಕೆಯ ಸಂಚಿಕೆಗಳ ಪ್ರಕಟನೆಯ ತಿಂಗಳುಗಳನ್ನು ಮಾರ್ಚ್, ಜೂನ್, ಸೆಪ್ಟೆಂಬರ್ ಮತ್ತು ಡಿಸೆಂಬರ್ ಎಂದು ನಿರ್ಧರಿಸಲಾಯಿತು. ಈ ಲೆಕ್ಕಾಚಾರದಂತೆ ಹತ್ತನೆಯ ಸಂಪುಟದ ನಾಲ್ಕನೆಯ ಸಂಚಿಕೆಯನ್ನು ಈ ಡಿಸೆಂಬರ್ ತಿಂಗಳಿನ ಸಂಚಿಕೆಯೊಂದಿಗೆ ಕೊಟ್ಟಂತಾಗುತ್ತದೆ. ಮುಂದಿನ ಮಾರ್ಚ್ ತಿಂಗಳಿನದು ಹನ್ನೊಂದನೆಯ ಸಂಪುಟದ ಮೊದಲನೆಯ ಸಂಚಿಕೆ.

'ಬ್ಯಾಂಕಿಂಗ್ ಪ್ರಪಂಚ'ವನ್ನು ಆರಂಭಿಸಿದಾಗ ಈ ಪತ್ರಿಕೆ ಎಷ್ಟು ಕಾಲ ನಡೆದೀತೋ ಎಂಬ ಆತಂಕ ನಮ್ಮಲ್ಲಿತ್ತು: ಮೊದಲನೆಯದಾಗಿ ಲೇಖಕರ ಕೊರತೆ. ಹಣ ಮತ್ತು ಬ್ಯಾಂಕಿಂಗ್ ವಿಚಾರಗಳಿಗೇ ಮೀಸಲಾದ ಈ ಪತ್ರಿಕೆಗಾಗಿ ಈ ವಿಷಯಗಳನ್ನು ಕುರಿತು ಲೇಖನಗಳನ್ನು ಬರೆಯಬಲ್ಲವರು ಎಷ್ಟು ಮಂದಿ ಸಿಕ್ಕಾರು, ಅವರು ಎಷ್ಟು ಕಾಲ ನಮ್ಮೊಂದಿಗೆ ಸಹಕರಿಸಿಯಾರು ಎಂಬ ಬಗ್ಗೆ ಸಂದೇಹವಿತ್ತು. ಈ ಕ್ಷೇತ್ರ ಬಹಳ ಕಿರಿದಾದದ್ದಾದ್ದರಿಂದ ಇದನ್ನು ಅರ್ಥಶಾಸ್ತ್ರ ಕುರಿತ ಪತ್ರಿಕೆಯಾಗಿ ಮಾಡಿ ಇದರ ವ್ಯಾಪ್ತಿಯನ್ನು ವಿಸ್ತರಿಸುವುದು ಒಳ್ಳೆಯದು ಎಂದು ನಮಗೆ ಬುದ್ಧಿವಾದ ಹೇಳಿದವರೂ ಉಂಟು. ಆಗ ವಿಷಯಗಳ ಕೊರತೆ ಇರದು ; ಹೆಚ್ಚಿನ ವಿಷಯಗಳನ್ನು ಕುರಿತು ಲೇಖನಗಳನ್ನು ಬರೆಯಬಹುದು, ಬರೆಸಬಹುದು ; ಹೆಚ್ಚು ಮಂದಿ ಓದುಗರನ್ನು ಇದು ತಲಪುವ ಹಾಗೆ ಮಾಡಬಹುದು ; ಹೆಚ್ಚು ಜನರ ಬೆಂಬಲ ಪ್ರೋತ್ಸಾಹ ಪಡೆಯಬಹುದು ಎಂದು ಹೇಳಲಾಗುತ್ತಿತ್ತು.

### ಪತ್ರಿಕೆಯ ಅಗತ್ಯ

ಅರ್ಥಶಾಸ್ತ್ರವನ್ನು ಕುರಿತಂತೆ ಕನ್ನಡದಲ್ಲಿ ಯಾವುದೇ ಪತ್ರಿಕೆ ಇಲ್ಲವೆಂಬುದು ನಿಜ. ಅಂಥ ಪತ್ರಿಕೆಯೊಂದರ ಅಗತ್ಯ ಬಹಳವಾಗಿದೆ ಎಂಬುದನ್ನೂ ನಾವು ಒಪ್ಪುತ್ತೇವೆ. ಆದರೆ 'ಬ್ಯಾಂಕಿಂಗ್ ಪ್ರಪಂಚ' ಹುಟ್ಟಿಕೊಂಡಿದ್ದು ಒಂದು ನಿರ್ದಿಷ್ಟವಾದ ಸಂದರ್ಭದಲ್ಲಿ, ಒಂದು ಗೊತ್ತಾದ ಉದ್ದೇಶದ ಸಾಧನೆಗಾಗಿ. ಈ ಎರಡು ದಶಕಗಳಲ್ಲಿ ಬ್ಯಾಂಕುಗಳ ಕಛೇರಿಗಳು ದೇಶದ ಉದ್ದಗಲಕ್ಕೂ ಹಬ್ಬಿವೆ. ಗ್ರಾಹಕರಿಗೆ ಪರಂಪರಾಗತ ಸೇವೆ ಸಲ್ಲಿಸುವುದರ ಜೊತೆಗೆ, ಅದನ್ನು ವಿಸ್ತರಿಸುವುದರ ಜೊತೆಗೆ, ಅದಕ್ಕೆ ಹಲವು ಮಗ್ಗಲುಗಳನ್ನು ಜೋಡಿಸುವುದರ ಜೊತೆಗೆ ಬ್ಯಾಂಕುಗಳು ಇಂದು ಜನಜೀವನವನ್ನು ಪರಿವರ್ತಿಸುವ ಮಹತ್ತರವಾದ ಕಾರ್ಯದಲ್ಲೂ ತೊಡಗಿವೆ. ಹೀಗಾಗಿ ಅವು ಇಂದು ಜನಜೀವನದಲ್ಲಿ ಹಾಸುಹೊಕ್ಕಾಗಿವೆ. ಇಂಥ ಸಂಸ್ಥೆಗಳು ಯಾವ ಭಾಷೆಯಲ್ಲಿ ವ್ಯವಹಾರ ಮಾಡಬೇಕು ? ಒಂದು ಪ್ರದೇಶದ ಜನರು ಆಡುವ ಭಾಷೆಯಲ್ಲೇ—ಅಥವಾ ಆ ಭಾಷೆಯಲ್ಲೂ—ಅವು ವ್ಯವಹಾರ ನಡಸಬೇಕು ಎನ್ನುವುದಾದರೆ, ಅದಕ್ಕೆ ಭಾಷೆಯನ್ನು ಅಣಿಗೊಳಿಸುವ ಕಾರ್ಯವನ್ನು ಯಾರು ಮಾಡಬೇಕು ? ಆ ಕ್ಷೇತ್ರದಲ್ಲಿ ನಿರತರಾದವರೇ ಇದರಲ್ಲಿ ಆಸಕ್ತಿ ತಳೆಯಬೇಕು. ಇದೊಂದು ಆಂದೋಲನವಾಗಬೇಕು. ಏಕೆಂದರೆ ಯಾವುವೋ ಕೆಲವು ಗೊತ್ತಾದ ನಮೂನೆಗಳನ್ನು ಆ ಭಾಷೆಗೆ ಅನುವಾದ ಮಾಡಿದರೆ, ಪಾರಿಭಾಷಿಕ ಪದಗಳನ್ನು ಭಾಷಾಂತರಿಸಿದರೆ ಈ ಕೆಲಸ ಮುಗಿದಂತಲ್ಲ. ಬ್ಯಾಂಕಿಂಗ್ ಪರಿಕಲ್ಪನೆ ಸದಾ ವಿಸ್ತರಿಸುತ್ತಿದೆ. ಅದು ಹೊಸ ಹೊಸ ಆಯಾಮಗಳನ್ನು ಕೂಡಿಸಿಕೊಳ್ಳುತ್ತಿದೆ. ಅದರ ಕ್ಷಿತಿಜಗಳು ದೂರದೂರ ಜಾರು

ತ್ತಿವೆ. ಪಾಶ್ಚಾತ್ಯ ಲೋಕದಲ್ಲಂತೂ ಬ್ಯಾಂಕಿಂಗ್ ಕ್ಷೇತ್ರ ಸ್ಫೋಟಗೊಳ್ಳುತ್ತಿದೆ : ಆದರೆ ಈ ಸ್ಫೋಟ ವಿನಾಶಕಾರಕವಲ್ಲ. ಇದೊಂದು ವಿನೂತನ ಹಾಗೂ ಅನುಸ್ಯೂತ ಸೃಷ್ಟಿಕಾರ್ಯ. ಇದರೊಂದಿಗೆ ಹೊಸ ಹೊಸ ಪರಿಭಾಷೆ ಸೃಷ್ಟಿಯಾಗುತ್ತಿದೆ. ಜೊತೆಗೆ ದೇಶದ ಆರ್ಥಿಕ ವಿಕಾಸವನ್ನು ಸಾಧಿಸುವ ಸಲುವಾಗಿ ಭಾರತದಲ್ಲಿ ಅನೇಕ ಹೊಸಹೊಸ ಯೋಜನೆಗಳನ್ನೂ ಕಾರ್ಯಕ್ರಮಗಳನ್ನೂ ಹಮ್ಮಿಕೊಳ್ಳಲಾಗುತ್ತಿದೆ. ಕ್ರಿಯಾವಿಧಿಗಳನ್ನು ರೂಪಿಸಲಾಗುತ್ತಿದೆ. ಇವನ್ನು ಕುರಿತ ಮೂಲಭೂತ ಅರಿವು ನಮ್ಮ ಭಾಷೆಯಲ್ಲಿ ಮೂಡದಿದ್ದರೆ ಇದನ್ನಾಧರಿಸಿದ ವ್ಯವಹಾರವನ್ನು ನಮ್ಮ ಭಾಷೆಯಲ್ಲಿ ಮಾಡುವುದು ಸಾಧ್ಯವಾಗುವುದಿಲ್ಲ. ಆದ್ದರಿಂದ ಬ್ಯಾಂಕಿಂಗ್ ಕುರಿತಂತೆ ವಿಪುಲವಾಗಿ ಬೆಳೆಯುತ್ತಿರುವ ವಿಚಾರವೆಲ್ಲ ನಮ್ಮ ಭಾಷೆಯಲ್ಲೂ ಬರಬೇಕು. ಇದೊಂದು ನಿರಂತರ ಸೃಷ್ಟಿಕಾರ್ಯ. ಇದಕ್ಕೊಂದು ಕೇಂದ್ರ ಇರಬೇಕು. ಇದಕ್ಕೊಂದು ಮಾಧ್ಯಮವೂ ಇರಬೇಕು. ಇಂಥ ಚಿಂತನೆಯ ಫಲವೇ 'ಬ್ಯಾಂಕಿಂಗ್ ಪ್ರಪಂಚ.'

ಬ್ಯಾಂಕಿಂಗು ಇಂದು ಸಿದ್ಧಾಂತ–ಆಚರಣೆ–ಕಾನೂನುಗಳ ತ್ರಿವೇಣೀ ಸಂಗಮ. ಹಿಂದೆ ಹೇಳಿದ ಹಾಗೆ ಈ ಕ್ಷೇತ್ರದಲ್ಲಿ ಸತತವಾಗಿ ಪ್ರಯೋಗಗಳು ನಡೆಯುತ್ತಲೇ ಇವೆ. ಇದಕ್ಕೆ ಸಂಬಂಧಿಸಿದ ಅಪಾರ ಸಾಹಿತ್ಯ ಸೃಷ್ಟಿಯ ಕಾರ್ಯ ಈ ಕ್ಷೇತ್ರದಲ್ಲಿ ನಿರತರಾದವರಿಂದಲೇ ನಡೆಯಬೇಕು. ಆದ್ದರಿಂದ 'ಬ್ಯಾಂಕಿಂಗ್ ಪ್ರಪಂಚ'ಕ್ಕೆ ಲೇಖನಗಳನ್ನು ಬ್ಯಾಂಕಿಂಗ್ ಉದ್ಯೋಗ ನಿರತರೇ ಬರೆಯಬೇಕು. ಈ ಹತ್ತು ವರ್ಷಗಳಲ್ಲಿ ಅನೇಕ ಬ್ಯಾಂಕ್ ಉದ್ಯೋಗಿಗಳು ಬ್ಯಾಂಕಿಂಗ್ ಪ್ರಪಂಚಕ್ಕಾಗಿ ಲೇಖನಗಳನ್ನು ಬರೆದುಕೊಟ್ಟಿದ್ದಾರೆ. 'ಬ್ಯಾಂಕಿಂಗ್ ಪ್ರಪಂಚ'ದ ಲೇಖನದಾರರ ಒಂದು ತಂಡವೇ ಸೃಷ್ಟಿಯಾಗಿದೆ. ಇದರಿಂದ ಬ್ಯಾಂಕಿಂಗ್ ಸಾಹಿತ್ಯ ಸಮೃದ್ಧವಾಗಿರುವುದಷ್ಟೇ ಅಲ್ಲ, ಕನ್ನಡದ ಬೆಳವಣಿಗೆಗೆ ಸಹಾಯವಾಗಿದೆ : ವಿಶಿಷ್ಟ ಪರಿಭಾಷೆಯ ಸೃಷ್ಟಿಗೆ ನೆರವಾಗಿದೆ.

## ಲೇಖನ ಕಾರಖಾನೆ

ಆದರೆ ಈ ಕೆಲಸ ವ್ಯವಸ್ಥಿತವಾಗಿ ನಡೆಯಬೇಕೆಂಬ ಉದ್ದೇಶದಿಂದ 1983ರಲ್ಲಿ ಬ್ಯಾಂಕಿಂಗ್ ವಿಷಯ ಕುರಿತ ಲೇಖನಾಕಾಂಕ್ಷಿಗಳಿಗೆ ತರಬೇತಿ ನೀಡಲು ಮೈಸೂರಿನಲ್ಲಿ ಒಂದು ಕಮ್ಮಟ ಏರ್ಪಡಿಸಲಾಗಿತ್ತು. ಕಮ್ಮಟದಲ್ಲಿ ಭಾಗವಹಿಸುವ ಪ್ರತಿಯೊಬ್ಬರೂ ಹಣ ಬ್ಯಾಂಕಿಂಗ್ ಕುರಿತ ಯಾವುದಾದರೊಂದು ವಿಷಯದಲ್ಲಿ ಲೇಖನ ಬರೆದು ತರಬೇಕೆಂದೂ, ಈ ಲೇಖನಗಳನ್ನು ಕಮ್ಮಟದಲ್ಲಿ ಓದಿ ವಿಮರ್ಶಿಸಿ ಇವಕ್ಕೊಂದು ರೂಪು ಕೊಡಬೇಕೆಂದೂ, ಇವಕ್ಕೆ ಸಂಬಂಧಿಸಿದಂತೆ ಪಾರಿಭಾಷಿಕ ಶಬ್ದಗಳನ್ನು ನಿರ್ಧರಿಸಬೇಕೆಂದೂ, ಇಂಗ್ಲಿಷಿನಲ್ಲಿರುವ ಬ್ಯಾಂಕಿಂಗ್ ಸಾಹಿತ್ಯವನ್ನು ಕನ್ನಡದಲ್ಲಿ ತರುವ ಪ್ರಯತ್ನ ಮಾಡಬೇಕೆಂದೂ, ಒಟ್ಟಿನಲ್ಲಿ ಕನ್ನಡದಲ್ಲಿ ಬ್ಯಾಂಕಿಂಗ್ ವ್ಯವಹಾರ ಮಾಡುವ ಕಾಲ ಬಂದಾಗ ಅದನ್ನು ನಿರ್ವಹಿಸಬಲ್ಲವರ ಪಡೆಯನ್ನು ನಿರ್ಮಿಸಬೇಕೆಂದೂ ಉದ್ದೇಶಿಸಲಾಗಿತ್ತು. ವಿವಿಧ ಬ್ಯಾಂಕುಗಳ ಪ್ರತಿನಿಧಿಗಳಿಂದ ಕೂಡಿದ ಈ ಕಮ್ಮಟ ನಾವು ನಿರೀಕ್ಷಿಸಿದ್ದಕ್ಕಿಂತ ಹೆಚ್ಚು ಯಶಸ್ವಿಯಾಯಿತು. ಒಂದು ರೀತಿಯಲ್ಲಿ ಅತ್ಯಂತ ಪ್ರಜಾತಂತ್ರಾತ್ಮಕವಾದ. ಭಾಷೆಯೊಂದಿಗೆ ವಿಷಯದ ಅರಿವನ್ನೂ ಮೂಡಿಸುವ, ಬ್ಯಾಂಕುಗಳಲ್ಲಿ ಕನ್ನಡವನ್ನು ಜಾರಿಗೆ ತರುವುದು ಅವಶ್ಯವೂ ಇಂದಲ್ಲ ನಾಳೆ ಅನಿವಾರ್ಯವೂ ಆದದ್ದೆಂಬ ನಂಬಿಕೆಯನ್ನು ಉಂಟುಮಾಡುವ, ಕನ್ನಡದಲ್ಲಿ ವ್ಯವಹಾರ ಮಾಡಲು ಅಗತ್ಯವಾದ ಆತ್ಮವಿಶ್ವಾಸವನ್ನು ಅವರಲ್ಲಿ ಮೂಡಿಸುವ ಸಾಧನ ಇದೆಂಬುದು ಮನವರಿಕೆಯಾಯಿತು.

ಈ ಮೊದಲನೆಯ ಕಮ್ಮಟ ಮೂಡಿಸಿದ ಉತ್ಸಾಹದಿಂದಾಗಿ ಇನ್ನು ಮುಂದೆ ಪ್ರತಿ ಆರು ತಿಂಗಳುಗಳಿಗೆ ಒಂದರಂತೆ ರಾಜ್ಯದ ಬೇರೆ ಬೇರೆ ಜಿಲ್ಲೆಗಳಲ್ಲಿ ಕಮ್ಮಟಗಳನ್ನು ನಡಸಬೇಕೆಂದು ತೀರ್ಮಾನಿಸಲಾಯಿತು. ಅಂತೆಯೇ ಇದುವರೆಗೆ ತಪ್ಪದೆ ಕಮ್ಮಟಗಳು ಸರತಿಯಂತೆ ನಡೆಯುತ್ತ ಬರುತ್ತಿವೆ. ಇವು 'ಬ್ಯಾಂಕಿಂಗ್ ಪ್ರಪಂಚ'ಕ್ಕೆ ತಕ್ಕ ಲೇಖನಗಳನ್ನು ಒದಗಿಸುವಲ್ಲಿ ನೆರವಾಗಿವೆ. ಈ ಹತ್ತು ವರ್ಷಗಳಲ್ಲಿ ಸೃಷ್ಟಿಯಾಗಿರುವ ಬ್ಯಾಂಕಿಂಗ್ ಸಾಹಿತ್ಯ ವಿಪುಲವಾದ್ದು, ವೈವಿಧ್ಯಮಯವಾದ್ದು ಎಂಬ ನಂಬಿಕೆ ನಮಗಿದೆ. ಜೊತೆಗೆ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಬಳಕೆಯಲ್ಲಿರುವ ಪಾರಿಭಾಷಿಕ ಪದಗಳಿಗೆ ಕನ್ನಡದಲ್ಲಿ ಸಂವಾದಿಯಾದ ಪದಗಳನ್ನು ಸೃಷ್ಟಿಸುವುದರಲ್ಲಿ, ರೂಪಿಸುವುದರಲ್ಲಿ ಅಥವಾ ನಿರ್ಣಯಿಸುವಲ್ಲಿ ಕಮ್ಮಟಗಳು ನಿರತವಾಗಿವೆ. ಬ್ಯಾಂಕಿಂಗ್ ಕಮ್ಮಟದ ಒಂದು ಉಪೋತ್ಪನ್ನವೆಂದರೆ ಬ್ಯಾಂಕಿಂಗ್ ನಿಘಂಟು. ಇದರಲ್ಲಿ ಸುಮಾರು ಮೂರು ಸಾವಿರ ಇಂಗ್ಲಿಷ್ ಪದಗಳ ಅರ್ಥ, ವ್ಯಾಖ್ಯೆ, ವಿವರಣೆ ಮತ್ತು ಕನ್ನಡದ ಸಮಾನ ಪದಗಳನ್ನು ನೀಡಲಾಗಿದೆ. ವಿಶ್ವಕೋಶ ಸದೃಶವಾದ ಈ ಕೃತಿ ಅಪಾರ ಮನ್ನಣೆ ಪಡೆಯಿತು. ಇದನ್ನು ಪ್ರಕಟಿಸಿದ ಮೇಲೆ (1985) ಕೂಡ ಈ ಕಾರ್ಯ ಅವಿರತವಾಗಿ ಸಾಗಿದೆ. ನಿಘಂಟನ್ನು ಪರಿಷ್ಕರಿಸಿ ವಿಸ್ತರಿಸುವ ಅಗತ್ಯ ಈಗ ಉಂಟಾಗಿದೆ.

## ಮೈಲಿಗಲ್ಲು

ಹತ್ತು ವರ್ಷ ತುಂಬುವ ಸಮಯ ಒಂದು ಮುಖ್ಯ ಘಟ್ಟ. ಇದೊಂದು ಮಹತ್ವದ ಮೈಲಿಗಲ್ಲು (ಕಿಮೀ ಕಲ್ಲು ಎನ್ನುವುದಾದರೆ ನಮ್ಮದೇನೂ ಅಭ್ಯಂತರವಿಲ್ಲ). ಈ ಸಂದರ್ಭದಲ್ಲಿ ನಾವು ಆತ್ಮನಿರೀಕ್ಷಣೆ ಮಾಡಿಕೊಳ್ಳಬೇಕಾಗಿದೆ. ತಪ್ಪು ಒಪ್ಪುಗಳ ತಾಳೆ ನೋಡಬೇಕಾಗಿದೆ. ಗೊತ್ತುಗುರಿಗಳನ್ನು ಪರೀಕ್ಷೆಗೆ ಒಡ್ಡಬೇಕಾಗಿದೆ. ಸರಿಯಾದ ದಿಕ್ಕನ್ನು ತಿದ್ದಿ ನಿಷ್ಕರ್ಷಿಸಿಕೊಳ್ಳಬೇಕಾಗಿದೆ. 'ಬ್ಯಾಂಕಿಂಗ್ ಪ್ರಪಂಚ'ದ ಇದುವರೆಗಿನ ಮಾರ್ಗಕ್ರಮಣವನ್ನು ಪರಿಶೀಲಿಸಿ ಇದನ್ನು ಉತ್ತಮಪಡಿಸಲು ವಾಚಕರೂ ಅಭಿಮಾನಿಗಳೂ ನೀಡುವ ಸಲಹೆಗಳನ್ನು ನಾವು ಅತ್ಯಂತ ಆದರದಿಂದ ಸ್ವೀಕರಿಸುತ್ತೇವೆ. ಅವನ್ನು ಕಾರ್ಯಗತಗೊಳಿಸಲು ಯತ್ನಿಸುತ್ತೇವೆ.

## ಉಪಯುಕ್ತ ಕೊಂಡಿ

'ಬ್ಯಾಂಕಿಂಗ್ ಪ್ರಪಂಚ'ದ ವಾಚಕವೃಂದವನ್ನು ವಿಸ್ತರಿಸುವ ಪ್ರಶ್ನೆಯನ್ನೂ ಇಲ್ಲಿ ಪರಿಶೀಲಿಸಬಹುದಾಗಿದೆ. ಇದಕ್ಕೇ ಸಂಬಂಧಿಸಿದ್ದೆಂದರೆ 'ಬ್ಯಾಂಕಿಂಗ್ ಪ್ರಪಂಚ'ದ ಲೇಖನಗಳ ಮಟ್ಟದ ಪ್ರಶ್ನೆ. 'ಬ್ಯಾಂಕಿಂಗ್ ಪ್ರಪಂಚ' ಹೆಚ್ಚು ಜನಪ್ರಿಯವಾಗುವಂತೆಮಾಡಲು ಲೇಖನಗಳನ್ನು ಇನ್ನಷ್ಟು ಸರಳಗೊಳಿಸಿ ಅದರ ಸಂದೇಶವನ್ನು ಎಲ್ಲರಿಗೂ ತಲುಪಿಸಲು ಯತ್ನಿಸಬೇಕು ಎಂಬುದಾಗಿ ಹೇಳಲಾಗಿದೆ. ಲೇಖನಗಳನ್ನು ಕ್ಲಿಷ್ಟಗೊಳಿಸುವುದು ನಮ್ಮ ಉದ್ದೇಶವಲ್ಲ. ಆದರೆ ಜನಪ್ರಿಯ ಪತ್ರಿಕೆಗಳೊಂದಿಗೆ ಸ್ಪರ್ಧಿಸುವುದೂ ನಮ್ಮ ಇಚ್ಛೆಯಲ್ಲ. ಹಾಗೆಂದು ಸಂಶೋಧನ ಪತ್ರಿಕೆಯಂತೆ (ರಿಸರ್ಚ್ ಜರ್ನಲ್) ಇದನ್ನು ಹವಾನಿಯಂತ್ರಿತ ಪ್ರಯೋಗಶಾಲೆಗೆ, ಪಂಡಿತವರ್ಯರ ಅವಗಾಹನೆಯಷ್ಟಕ್ಕೆ. ಸೀಮಿತಗೊಳಿಸುವುದೂ ನಮ್ಮ ಉದ್ದೇಶವಲ್ಲ. ಬ್ಯಾಂಕಿಂಗಿಗೆ ಸಂಬಂಧಿಸಿದಂತೆ ಪರಿಭಾಷೆಯನ್ನು ಸೃಷ್ಟಿಸುವುದು, ಬ್ಯಾಂಕಿಂಗ್ ಪರಿಕಲ್ಪನೆಯನ್ನು ಕನ್ನಡದಲ್ಲಿ ಮೂಡಿಸುವುದು, ಈ ಕ್ಷೇತ್ರದಲ್ಲಿ ನಿರತರಾದವರಿಗೆ ಅಗತ್ಯವಾದ ಪೂರಕ ಸಾಹಿತ್ಯವನ್ನು ಒದಗಿಸುವುದು 'ಬ್ಯಾಂಕಿಂಗ್ ಪ್ರಪಂಚ'ದ ಗುರಿ. ಇದು ಇತ್ತ ವಿದ್ವಾಂಸ ಪತ್ರಿಕೆಯೂ ಅಲ್ಲ, ಅತ್ತ ಜನಪ್ರಿಯ ಸಾಹಿತ್ಯ ಸೃಷ್ಟಿನಿರತವೂ ಅಲ್ಲ. ಇವೆರಡಕ್ಕೂ ನಡುವೆ ಅತ್ಯಂತ ಉಪಯುಕ್ತವಾದ ಕೊಂಡಿಯಂತೆ ಕಾರ್ಯ ನಿರ್ವಹಿಸುವುದು ಇದರ ಆಶಯ. ಈ ಅಗತ್ಯವನ್ನು ಪೂರೈಸುವ, ಈ ಕೊರತೆಯನ್ನು ತುಂಬುವ ಉದ್ದೇಶದಿಂದಲೇ ಈಪತ್ರಿಕೆಯನ್ನು ಆರಂಭಿಸಿದ್ದು. ಭಾರತದ ಬೇರೆ ಯಾವುದೇ ಭಾಷೆಯಲ್ಲಿ—ಹಿಂದಿಯಲ್ಲಿ ಕೂಡ—ಇಂಥ ಕೆಲಸ ಮಾಡಿದ್ದು ನಮ್ಮ ಗಮನಕ್ಕೆ ಬಂದಿಲ್ಲ. ಈ ಅವಶ್ಯ ಕಾರ್ಯವನ್ನು ನಿರ್ವಹಿಸುತ್ತಿದ್ದೇವೆಂದು ನಮಗೆಲ್ಲ ಹೆಮ್ಮೆಯಾಗುತ್ತದೆ. ಈ ಹೆಮ್ಮೆ ಕ್ಷಮಾರ್ಹವೆಂದುಕೊಂಡಿದ್ದೇವೆ. ಏಕೆಂದರೆ ಇದು ಗರ್ವವಲ್ಲ. ಇದು ಹೇಗೂ ಇರಲಿ, ಹತ್ತನೆಯ ವರ್ಷ ತುಂಬುತ್ತಿರುವ ಈ ಸಂದರ್ಭದಲ್ಲಿ ಧನ್ಯತೆಯ ಭಾವ ನಮ್ಮದು. ಆದರೆ ಇದರೊಂದಿಗೇ ನಮ್ಮ ಅರೆಕೊರೆಗಳ ಅರಿವೂ ನಮ್ಮಲ್ಲಿದೆಯೆಂದು ಹೇಳಬಯಸುತ್ತೇವೆ.

## ನೆನಕೆ

ಈ ಪತ್ರಿಕೆ ಇಷ್ಟು ಕಾಲ ನಿಲ್ಲದೆ ನಡೆದುಕೊಂಡು ಬಂದಿರುವುದಕ್ಕೆ ಕಾರಣರಾದವರೆಲ್ಲರ ಉಪಕಾರವನ್ನು ನೆನೆಯುವುದು ನಮ್ಮ ಕರ್ತವ್ಯ. ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳ ಸಮನ್ವಯ ಸಮಿತಿಯ ಅಧಿಕಾರವರ್ಗದ ಎಲ್ಲರೂ, ಎಲ್ಲ ಸದಸ್ಯರೂ ಇದರಲ್ಲಿ ತಳೆದಿರುವ ಆಸಕ್ತಿ ಅಪಾರ.

ಆದರೆ ಅವರಿಗೂ ಬ್ಯಾಂಕಿಂಗ್ ಪ್ರಪಂಚಕ್ಕೂ ನಡುವಿನ ಸಂಬಂಧ ಅವಿನಾಭಾವಸ್ವರೂಪದ್ದು. ಇದು ಅವರದೇ ಕೆಲಸ. ಸಮನ್ವಯ ಸಮಿತಿಯೊಂದಿಗೆ ಇತರ ಬ್ಯಾಂಕುಗಳ ಅನೇಕ ಉದ್ಯೋಗಿಗಳು ಸಹಕರಿಸಿದ್ದಾರೆ, ಹೆಗಲೆಣೆಯಾಗಿ ದುಡಿದಿದ್ದಾರೆ. ಇದು ಅವರ ಕೆಲಸವೂ ಹೌದಾದರೂ, ಅವರಿಗೆ ಧನ್ಯವಾದ ಅರ್ಪಿಸುವುದು ಸಂಪಾದಕರ ಕರ್ತವ್ಯ. ಈ ಹತ್ತು ವರ್ಷಗಳಲ್ಲಿ ಲೇಖಕರೂ ಜಾಹೀರಾತುದಾರರೂ ಸಾರ್ವಜನಿಕರೂ ಭಾರತೀಯ ಸ್ಟೇಟ್ ಬ್ಯಾಂಕಿನ ಉನ್ನತ ವ್ಯವಸ್ಥಾಪಕ ವರ್ಗದವರೂ ಪತ್ರಿಕೆಗೆ ಬೆನ್ನೆಲುಬಾಗಿ ನಿಂತಿದ್ದಾರೆ. ಅವರ ರಕ್ಷೆ ಇದೇ ರೀತಿ ಮುಂದುವರಿಯುವುದೆಂಬ ನಂಬಿಕೆ ನಮಗಿದೆ. ಅವರಿಗೆಲ್ಲ ನೆನಕೆಗಳು.

ಪತ್ರಿಕೆಯ ಮುದ್ರಕರ ನೆರವನ್ನು ವಿವರಿಸಲು ಉಚಿತವಾದ ಮಾತುಗಳು ದೊರಕಲಾರವು. ಪತ್ರಿಕೆಯ ಮೊದಮೊದಲ ಸಂಚಿಕೆಗಳನ್ನು ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟು ಇದಕ್ಕೊಂದು ಸ್ವರೂಪ ದೊರಕಿಸಿಕೊಟ್ಟವರು ಬೆಂಗಳೂರಿನ ಈಸ್ಟರ್ನ್ ಪ್ರೆಸ್ಸಿನ ಶ್ರೀ ಚಿಂತಾಮಣಿ ಅವರು. ಅನಂತರ ಸೌಕರ್ಯ ದೃಷ್ಟಿಯಿಂದ ಇದನ್ನು ಮೈಸೂರಿನಲ್ಲಿ ಮುದ್ರಿಸುವುದು ಅನಿವಾರ್ಯವಾಯಿತು. ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸಿನ ಶ್ರೀ ಜಿ. ಎಚ್. ಕೃಷ್ಣಮೂರ್ತಿಯವರೂ ಅವರ ಸಿಬ್ಬಂದಿ ವರ್ಗದವರೂ ಇದು ತಮ್ಮದೇ ಕಾರ್ಯ ಎಂದು ಪರಿಭಾವಿಸಿ ಅತ್ಯಂತ ಶ್ರದ್ಧೆಯಿಂದ ಶೀಘ್ರವಾಗಿ ನೆರವೇರಿಸಿಕೊಡುತ್ತಿದ್ದಾರೆ. ಶ್ರೀ ಮೂರ್ತಿ ಅವರು ಮುದ್ರಣವೆಚ್ಚದ ಹೊರೆಯನ್ನು ಇಳಿಸಲೂ ವಿಷಯದ ಹರಹನ್ನು ಹೆಚ್ಚಿಸಲೂ, ವಿನ್ಯಾಸವನ್ನು ಹೆಚ್ಚು ಹೆಚ್ಚು ಆಕರ್ಷಕವಾಗಿ ಮಾಡಲೂ ನಿರಂತರವಾಗಿ ಶ್ರಮಿಸುತ್ತಿದ್ದಾರೆ. ಇವರಿಗೆ ನಾವು ಆಭಾರಿಗಳಾಗಿದ್ದೇವೆ ಎಂದು ಹೇಳಿದರೆ ಈ ಮಾತು ನಮ್ಮ ಎಲ್ಲ ಭಾವವನ್ನೂ ಅಭಿವ್ಯಕ್ತಿಸಲಾರದು. ಆದರೂ ಇಷ್ಟಕ್ಕೇ ನಾವು ತೃಪ್ತರಾಗಬೇಕಾಗಿದೆ.

ಈ ಎಲ್ಲರ ನೆರವು ಪ್ರೋತ್ಸಾಹ ಬೆಂಬಲಗಳ ಭರವಸೆಯೊಂದಿಗೆ ಬ್ಯಾಂಕಿಂಗ್ ಪ್ರಪಂಚ ಹೊಸ ವರ್ಷದತ್ತ ದೃಷ್ಟಿ ಹಾಯಿಸುತ್ತಿದೆ. ★



# ಸ್ವಿಸ್ ಬ್ಯಾಂಕುಗಳ ಮೌನವ್ರತ

**ಜಿಬ್ರಾಲ್ಟರಿನ ಬಂಡೆಗಲ್ಲಿನಂತೆ ಸ್ವಿಸ್ ಬ್ಯಾಂಕುಗಳ ಗೌಪ್ಯತೆ ಸ್ಥಿರವಾಗಿ ಮುಂದುವರಿದುಕೊಂಡು ಬಂದಿದೆ.**

**ಪಿ. ಗೋವಿಂದಾಚಾರ್**
ವಾಣಿಜ್ಯಶಾಸ್ತ್ರ ಪ್ರವಾಚಕ
ಆಚಾರ್ಯ ಪಾಠಶಾಲಾ ಕಾಲೇಜು, ಬೆಂಗಳೂರು-19

ಸ್ವಿಟ್ಜರ್‌ಲೆಂಡ್ ಇಂದು ಮುಂದುವರಿದ ರಾಷ್ಟ್ರವಾಗಿರಬೇಕಾದರೆ, ಅಲ್ಲಿಯ ನಿಸರ್ಗ ಸಂಪನ್ಮೂಲಗಳು ಹಾಗೂ ಪ್ರವಾಸೋದ್ಯಮ, ಗಡಿಯಾರ, ತಂತ್ರಜ್ಞಾನ, ಬಟ್ಟೆ ವ್ಯಾಪಾರ ಮುಂತಾದ ಆರ್ಥಿಕ ಚಟುವಟಿಕೆಗಳು ಭಾಗಶಃ ಕಾರಣವಾಗಿವೆ. ಆದರೆ ಇವೆಲ್ಲಾ ಆನುಷಂಗಿಕ. 'ಸ್ವಿಸ್ ಬ್ಯಾಂಕಿಂಗ್ ಪ್ರಗತಿಯೇ ದೇಶದ ಪ್ರಗತಿ' ಎಂದರೆ ಅತ್ಯೋಕ್ತಿಯಾಗಲಾರದು. ಇವೆರಡೂ ಒಂದು ನಾಣ್ಯದ ಎರಡು ಮುಖಗಳಿದ್ದಂತೆ. ಈ ಅಂಶವನ್ನೇ ವಿಶ್ವವೀಕ್ಷಣಾ ಸಂಸ್ಥೆಯು 'ಸ್ವಿಸ್ ಬ್ಯಾಂಕಿಂಗ್ ಚಕ್ರಾಧಿಪತ್ಯವು ಸ್ವಿಟ್ಜರ್‌ಲೆಂಡಿಗಿಂತ ಭಾರಿಯಾದುದು' ಎಂದು ಉತ್ಪ್ರೇಕ್ಷಿಸಿದೆ. ಇದೊಂದು ಗೌರವ ಪ್ರತಿಷ್ಠೆಯ ವಿಷಯವೇ ಆಗಿದೆ.

'ಹಣಕಾಸಿನ ಕಾಶಿ' ಎಂದು ಪ್ರಸಿದ್ಧವಾದ ಸ್ವಿಟ್ಜರ್‌ಲೆಂಡ್ ವಿಶ್ವದಲ್ಲೇ ಅತಿ ಹೆಚ್ಚಿನ ಬ್ಯಾಂಕ್ ಸಾಂದ್ರತೆ ಹೊಂದಿದೆ. ಸುಮಾರು 42,000 ಚದರ ಕಿಮೀ. ವಿಸ್ತೀರ್ಣವುಳ್ಳ ಈ ಸಣ್ಣ ದೇಶದಲ್ಲಿ 38 ಮೂಲ ಬ್ಯಾಂಕುಗಳೂ 564 ಶಾಖೆಗಳೂ ಇವೆ. ದಿ ಯೂನಿಯನ್ ಬ್ಯಾಂಕ್ ಆಫ್ ಸ್ವಿಟ್ಜರ್‌ಲೆಂಡ್, ದಿ ಸ್ವಿಸ್ ಬ್ಯಾಂಕ್ ಕಾರ್ಪೊರೇಷನ್ ಮತ್ತು ದಿ ಕ್ರೆಡಿಟ್ ಸ್ವಿಸ್— ಇವು ಮೂರೂ ದೇಶದ ಅತ್ಯಂತ ಪ್ರಸಿದ್ಧ ಹಾಗೂ ಭಾರಿ ಬ್ಯಾಂಕುಗಳಾಗಿವೆ. ದಿ ಫೆಡರಲ್ ಬ್ಯಾಂಕಿಂಗ್ ಕಮಿಷನ್ ಆಫ್ ಸ್ವಿಟ್ಜರ್‌ಲೆಂಡ್ ಇಡೀ ಬ್ಯಾಂಕಿಂಗ್ ವ್ಯವಸ್ಥೆಗೇ ಪ್ರಾಧಿಕಾರವಾಗಿದೆ. ಬ್ಯಾಂಕುಗಳ ವಹಿವಾಟಿನ ಸರಾಸರಿ ಮೊತ್ತ 380 ಬಿಲಿಯನ್ ಫ್ರಾಂಕುಗಳು! ಇದರಲ್ಲಿ ಶೇ. 50 ರಷ್ಟು ವಿದೇಶೀಯರದು. ವಿದೇಶೀ ಹಣದ ಈ ಮಹಾಪೂರ ಸ್ವಿಸ್ ಬಂಡವಾಳ ಪೇಟೆಯನ್ನಾವರಿಸಿರುವುದಲ್ಲದೆ ಫ್ರಾಂಕಿನ ಮೌಲ್ಯವನ್ನು ಶಿಖರಕ್ಕೇರಿಸಿದೆ ಝೂರಿಚ್ ಸ್ಟಾಕ್ ಪೇಟೆ ವಿಶ್ವದಲ್ಲಿ ಮೂರನೆಯ ಸ್ಥಾನ ಗಳಿಸಿದೆ.

ಠೇವಣಿದಾರರಿಗೆ ಮಿತಿಮೀರಿದ ರಕ್ಷಣೆ ನೀಡುವುದೇ 300ಕ್ಕೂ ಹೆಚ್ಚು ಖಾಸಗಿ ಬ್ಯಾಂಕುಗಳ ಪ್ರಮುಖ ಆಕರ್ಷಣೆ. ಇದರ ಜೊತೆಗೆ ರಾಜಕಾರಣಿಗಳ ನಿಷ್ಪಕ್ಷಪಾತ ಮನೋಭಾವನೆಯೂ ಸ್ವಲ್ಪ ಮಟ್ಟಿಗೆ ವಿದೇಶೀಯರನ್ನು ಆಕರ್ಷಿಸಿದೆ. ನಿರಾಶ್ರಿತ ಹಣಕ್ಕೆ ಸ್ವಿಸ್ ಬ್ಯಾಂಕುಗಳು ಅಯಸ್ಕಾಂತವಿದ್ದಂತೆ. ಗ್ರಾಹಕನ ಖಾತೆಯ ರಹಸ್ಯಪಾಲನೆಗೆ ಸ್ವಿಸ್ ಬ್ಯಾಂಕುಗಳು ಅತಿಹೆಚ್ಚಿನ ಪ್ರಾಶಸ್ತ್ಯವನ್ನು ಕೊಟ್ಟಿವೆ. ಸಾಂಪ್ರದಾಯಿಕವಾಗಿಯೂ ಶಾಸನಬದ್ಧ ಕರ್ತವ್ಯವಾಗಿಯೂ ಬ್ಯಾಂಕುಗಳು ಗೋಪ್ಯತೆಯನ್ನು ಎರಡು ಶತಮಾನಗಳಿಂದಲೂ ಕಾಪಾಡಿಕೊಂಡು ಬಂದಿವೆ. ಗೋಪ್ಯ ಸ್ವಭಾವ ಮತ್ತು ಪ್ರವೃತ್ತಿಯೇ ಸ್ವಿಸ್ ಬ್ಯಾಂಕುಗಳ ಉಸಿರು, ಜೀವ ಹಾಗೂ ದೇಶದ ಸರ್ವತೋಮುಖ ಬೆಳವಣಿಗೆಗೆ ಆಧಾರಸ್ತಂಭವಾಗಿದೆ. ಗೌಪ್ಯ ರಕ್ಷಣೆಗೆ ಕಾನೂನಿನ ಹೊದ್ದಿಕೆ ಹಾಗೂ ಗ್ಯಾರಂಟಿ—ಎರಡೂ ಇದೆ. ಕಾನೂನು ಹಾಗೂ ಹಣಕಾಸಿನ ಚೌಕಟ್ಟಿನಲ್ಲಿ ರಹಸ್ಯಪಾಲನೆಗೆ ಸಂಬಂಧಿಸಿದ ಕಲಮುಗಳನ್ನು ಭದ್ರವಾಗಿ ಸೇರಿಸಲಾಗಿದೆ.

## ಉಗಮ, ವಿಕಾಸ

ಸ್ವಿಸ್ ಬ್ಯಾಂಕುಗಳ ಮೌನವ್ರತ 18ನೆಯ ಶತಮಾನದ ಆದಿಭಾಗದಲ್ಲಿ ಝೂರಿಚ್ ಮತ್ತು ಜಿನೀವಾ ನಗರಗಳಲ್ಲಿ ಆರಂಭವಾಯ್ತು. ಎರಡು ಮಹಾಯುದ್ಧಗಳು ಇದಕ್ಕೆ ಪುಟಕೊಟ್ಟುವು. 1934 ರಲ್ಲಿ ಸ್ವಿಸ್ ಸರ್ಕಾರ ಸಂಸತ್ತಿನಲ್ಲಿ "ಬ್ಯಾಂಕ್-ಗ್ರಾಹಕರ ನಡುವೆ ಇರುವ ರಹಸ್ಯವನ್ನು ಬಹಿರಂಗಪಡಿಸುವುದು ಮತ್ತು ಇದಕ್ಕೆ ಸಂಬಂಧಪಟ್ಟ ಕಟ್ಟಳೆಯ ಉಲ್ಲಂಘನೆ ಮಾಡುವುದು ಶಿಕ್ಷಾರ್ಹ ಅಪರಾಧಗಳು" ಎಂದು ಮಸೂದೆಯೊಂದನ್ನು ಮಂಡಿಸಿತು. ಇದರಿಂದಾಗಿ ಠೇವಣಿದಾರರಿಗೂ ಹಣ ಹೂಡುವವರಿಗೂ ಸ್ವಿಟ್ಜರ್‌ಲೆಂಡ್ ಒಂದು ಭದ್ರತಾ ದ್ವೀಪವಾಯ್ತು.

"ಯಾವ ಕಾರಣದಿಂದಲೂ ಯಹೂದಿಗಳ ಸಂಪತ್ತು ಜರ್ಮನಿಯನ್ನು ಬಿಟ್ಟು ಹೋಗಕೂಡದು. ಬಂಡವಾಳ ರವಾನೆ ಅಥವಾ ಬಂಡವಾಳ ರೂಪದ ಯಾವುದೇ ಪದಾರ್ಥಗಳ ರಫ್ತು ನಿಷಿದ್ಧ" ಎಂದು ಹಿಟ್ಲರ್ ಸುಗ್ರೀವಾಜ್ಞೆಯೊಂದನ್ನು ಹೊರಡಿಸಿದ. ಭಯದಿಂದಲೇ ನೆರೆ ರಾಷ್ಟ್ರಗಳು ಆಜ್ಞೆಯನ್ನು ಪಾಲಿಸಿದವು. ಯಹೂದಿಗಳ ಹಿತಾ

ಸಕ್ತಿಗಳನ್ನು ರಕ್ಷಿಸಲು ಸ್ವಿಸ್ ಬ್ಯಾಂಕುಗಳು ಪ್ರಥಮ ಬಾರಿಗೆ 'ನಾಮಾಂಕಿತ ಖಾತೆ ಮತ್ತು ಸಂಖ್ಯಾ ಖಾತೆ' ಎಂಬ ಎರಡು ವಿಧ ಖಾತೆಗಳನ್ನು ಸಂಯೋಜಿಸಿದುವು.

ಸ್ವಿಸ್ ಕಾನೂನಿನ ಪ್ರಕಾರ ತೆರಿಗೆ ಹಾಗೂ ವಿದೇಶಿ ವಿನಿಮಯ ಕಟ್ಟಳೆಯ ಉಲ್ಲಂಘನೆ ಅಪರಾಧವಲ್ಲ. ಈ ವಿಚಾರಗಳನ್ನು ಗುಪ್ತವಾಗಿಡಲು ಇಚ್ಛಿಸುವ ವ್ಯಕ್ತಿ ಸಂಖ್ಯಾಖಾತೆಯನ್ನು ಪ್ರಾರಂಭಿಸಬಹುದು. ಈ ಗೂಢ ಸಂಖ್ಯೆಯಿಂದಲೇ ಬ್ಯಾಂಕ್‌ನೊಡನೆ ವ್ಯವಹರಿಸಬೇಕು. ಆದ್ದರಿಂದ ಗೋಪ್ಯತೆಯನ್ನು ಕಾಪಾಡಲು ಸಂಖ್ಯಾಖಾತೆ ಒಂದು ಸಾಧನವಾಯ್ತು.

ನಾಮಾಂಕಿತ ಖಾತೆಯನ್ನು ನೇರವಾಗಿ ಗ್ರಾಹಕನೇ ಪ್ರಾರಂಭಿಸಬಹುದು ಅಥವಾ ವಕೀಲ, ನೋಟರಿ, ಲೆಕ್ಕ ಪರಿಶೋಧಕ ಮತ್ತು ನ್ಯಾಸಧಾರಿಯ ಮೂಲಕ ತೆರೆಯಬಹುದು. ನಿಜವಾದ ಹೆಸರನ್ನು ರಹಸ್ಯವಾಗಿಡಲು ಯಾವುದಾದರೂ ಹೂವು, ನದಿ, ಸ್ಥಾವರಗಳ ಹೆಸರಿನಲ್ಲಿ ಖಾತೆ ತೆರೆದು ಅದೇ ಹೆಸರಿನಲ್ಲಿ ವ್ಯವಹರಿಸಬೇಕು. ಯಜಮಾನನಾರು ? ಫಲಾನುಭವಿ ಯಾರು ? ಎಂಬುದು ಚಿದಂಬರ ರಹಸ್ಯ. ಇಂದಿಗೂ ಅವೆಷ್ಟೋ ಸಹಸ್ರಾರು ಖಾತೆಗಳಿಗೆ ಯಜಮಾನರಾರು ಎಂಬುದೇ ತಿಳಿದಿಲ್ಲ ಮತ್ತು ಇನ್ನಷ್ಟು ಖಾತೆಗಳು ನಿದ್ರಿಸುತ್ತಿವೆ.

ಕೇವಲ ಪಾಸ್‌ಪೋರ್ಟ್ ಇದ್ದರೆ ಸಾಕು. ಪರಿಚಯ ಅಗತ್ಯವಿಲ್ಲ. ಯಾವ ದೇಶದ ಹಣದಲ್ಲಾಗಲಿ ಖಾತೆ ತೆರೆಯಬಹುದು. ಬ್ಯಾಂಕಿನ ಯಾವ ಮುಂಗಟ್ಟೆಯಲ್ಲಾಗಲಿ ನೇರವಾಗಿ ಚಿನ್ನದ ವ್ಯಾಪಾರವನ್ನು ಮಾಡಬಹುದು. ಗ್ರಾಹಕನ ಖಾತೆಯ ಗುಟ್ಟು ಬ್ಯಾಂಕ್ ಸಿಬ್ಬಂದಿವರ್ಗದ ಒಬ್ಬಿಬ್ಬ ವ್ಯಕ್ತಿಗಳಿಗೆ ಮಾತ್ರ ತಿಳಿದಿರುವುದು. ಬೇರೆಯವರು ಇದರಲ್ಲಿ ತಲೆ ಹಾಕುವಂತಿಲ್ಲ. ಬ್ಯಾಂಕುಗಳ ಸುತ್ತಮುತ್ತ ಹೊರಗೂ ಒಳಗೂ ಶ್ರೇಷ್ಠವಾದ ಭದ್ರತಾ ವ್ಯವಸ್ಥೆ ಇರುವುದು. 1934ನೆಯ ಸ್ವಿಸ್ ಬ್ಯಾಂಕ್ ಕಾನೂನಿನ 47ನೆಯ ಕಲಮಿನ ಪ್ರಕಾರ ಅನಧಿಕೃತವಾಗಿಯೋ ಇಲ್ಲ ಪ್ರೇರಣೆಯಿಂದಲೋ ರಹಸ್ಯವನ್ನು ಬಯಲು ಮಾಡಿದವನಿಗೆ 6 ತಿಂಗಳು ಜೈಲುಶಿಕ್ಷೆ ಮತ್ತು 50,000 ಫ್ರಾಂಕುಗಳ ದಂಡ ವಿಧಿ ಇರುವುದು. ಸ್ವಿಸ್ ಅಪರಾಧ ಕೋಡ್ 273ನೆಯ ಕಲಮಿನ ಸೇರ್ಪಡೆಯಿಂದ ಶಿಕ್ಷೆಯ ತೀವ್ರತೆ ಇಮ್ಮಡಿಸಿತು ಮತ್ತು ಗೌಪ್ಯದ ಚೌಕಟ್ಟು ಇನ್ನಷ್ಟು ಬಲವಾಯಿತು. ರಹಸ್ಯ ಕಾಪಾಡುವುದರಲ್ಲಿ ಅಲಕ್ಷ್ಯ ತೋರಿದವನು 30,000 ಫ್ರಾಂಕುಗಳ ದಂಡ ತೆರಬೇಕಾಗುವುದು. ಲಂಚ ಪ್ರೇರಣೆಯಿಂದ ಗುಟ್ಟನ್ನು ಬಹಿರಂಗಪಡಿಸುವುದೂ ಅಪರಾಧ. ವಿಶ್ರಾಂತನಾದ ಸಿಬ್ಬಂದಿಯೂ ಕೂಡ ರಹಸ್ಯವನ್ನು ಕಾಪಾಡಬೇಕು. ಗುಟ್ಟಿನ ವ್ಯಾಪ್ತಿ ಕೇವಲ ಖಾತೆಯಲ್ಲಿರುವ ಶಿಲ್ಕು ಮಾತ್ರಕ್ಕೆ ಮೀಸಲಾಗಿರುವುದಿಲ್ಲ. ಗ್ರಾಹಕನ ಮರಣಾನಂತರವೂ ಅದು ಮುಂದುವರಿಯುವುದು.

ಸ್ವಿಸ್ ಬ್ಯಾಂಕ್ ಇತಿಹಾಸದಲ್ಲಿ 1977 ಒಂದು ಕರಾಳ ವರ್ಷ. ಗಡುಸಾದ ಈ ಪಿರಮಿಡ್‌ನಲ್ಲಿ ಬಿರುಕುಂಟಾಯಿತು. 'ಚಿಯಾಸ್ಸೊ' ಹಗರಣದಿಂದ ಸ್ವಿಸ್ ಬ್ಯಾಂಕ್ ಪ್ರತಿಷ್ಠೆ ದೊಪ್ಪನೆ ಬಿತ್ತು. ದೇಶದ ಭಾರಿ ಬ್ಯಾಂಕುಗಳಲ್ಲಿ 3ನೆಯ ಸ್ಥಾನ ಪಡೆದ ಕ್ರೆಡಿಟ್ ಸ್ವಿಸ್'. ಚಿಯಾಸ್ಸೊ ಶಾಖೆಯಿಂದ ಟೆಕ್ಸಾನ್ ಎಂಬ ರೋಗಗ್ರಸ್ಥ ಸಂಸ್ಥೆಯೊಂದನ್ನು ಸರಿಮಾಡಲು ಎಲ್ಲ ನಿಬಂಧನೆಗಳನ್ನೂ ಮೀರಿ ಗೌಪ್ಯದ ಹೆಸರಿನಲ್ಲಿ ಕೋಟ್ಯಂತರ ಫ್ರಾಂಕುಗಳನ್ನು ರವಾನಿಸಿತು. ಆದರೆ ಸಂಸ್ಥೆ ದಿವಾಳಿ ಮಾರ್ಗವನ್ನು ಹಿಡಿದು ಬ್ಯಾಂಕಿಗೆ ಅತಿ ಹೆಚ್ಚಿನ ನಷ್ಟವನ್ನುಂಟುಮಾಡಿತು. ರಾಜಿನಾಮೆಗಳ ಸುರಿಮಳೆಯಾಗಿ ಬ್ಯಾಂಕ್ ನಿರ್ವಹಣೆ ಮತ್ತು ನೀತಿಗಳಲ್ಲಿ ಬದಲಾವಣೆ ಕಂಡುಬಂದಿತು. ಫ್ರಾಂಕ್ ಅಪಮೌಲ್ಯದೆಡೆಗೆ ವಾಲಿತು, ಷೇರುಪೇಟೆ ಸ್ವಲ್ಪ ಅದುರಿತು. ಚೇತರಿಕೆ ಮತ್ತು ಯಥಾಸ್ಥಿತಿಯೆಡೆಗೆ ಬರಲು ಸ್ವಲ್ಪ ಕಾಲ ಹಿಡಿಯಿತು.

## ಪರಸ್ಪರ ಸಹಾಯ ಯೋಜನೆ

ಸ್ವಿಸ್ ನ್ಯಾಯಾಂಗ ಪದ್ಧತಿಗೂ ಇತರ ದೇಶಗಳ ನ್ಯಾಯಾಂಗ ಪದ್ಧತಿಗೂ ಹೊಂದಾಣಿಕೆ ಇಲ್ಲದಿರುವುದೇ ಅಪರಾಧಗಳ ಏರಿಕೆಗೆ ಕಾರಣವಾಗಿದೆ. ಅದರಲ್ಲೂ ಅಮೆರಿಕ ದೇಶವನ್ನು ಸ್ವಿಸ್ ಮೌನವು ಸಂಧಿಗ್ಧ ಪರಿಸ್ಥಿತಿಯಲ್ಲಿರಿಸಿದೆ. ಗ್ರಾಹಕ ರಾಶಿಯಲ್ಲಿ ಅಮೆರಿಕದ ತೆರಿಗೆ ಉಲ್ಲಂಘನೆಕಾರರೇ ಹೆಚ್ಚು. ಇವರ ಜೊತೆಗೆ ಮಾಫಿಯಾ ಭೂಗತ ಜಗತ್ತಿನ ಗ್ಯಾಂಗುಗಳು ಮತ್ತು ಇನ್ನೂ ಅನೇಕ ಕಳ್ಳಕೂಟದ ಜಾಲವೂ ಸೇರಿ ಸಮಸ್ಯೆಯನ್ನು ಇನ್ನಷ್ಟು ಜಟಿಲ ಮಾಡಿವೆ. ಇದನ್ನು ಬಗೆಹರಿಸಲು 1977ರಲ್ಲಿ ಎರಡೂ ರಾಷ್ಟ್ರಗಳು ಒಂದು ಒಪ್ಪಂದಕ್ಕೆ ಬಂದುವು.

''ಅಪರಾಧಿ ಗ್ರಾಹಕನ ಗುಟ್ಟನ್ನು ಬಯಲಿಗೆಳೆಯಲು ಸ್ವಿಸ್ ಬ್ಯಾಂಕ್ ಅಂತರರಾಷ್ಟ್ರೀಯ ಪರಸ್ಪರ ಸಹಾಯ ಯೋಜನೆ (IMAC) ನೆರವಾಗುವುದು'' ಎಂದು ಸ್ವಿಸ್ ಬ್ಯಾಂಕುಗಳು ಘೋಷಿಸಿದುವು. ಒಪ್ಪಂದಕ್ಕೆ ಎರಡೂ ರಾಷ್ಟ್ರಗಳು ಸಹಿ ಹಾಕಿದುವು. ಈ ಯೋಜನೆಯ ಸೌಲಭ್ಯವನ್ನು ಭಾರತಕ್ಕೂ ವಿಸ್ತರಿಸಲಾಯಿತು. ವಿದೇಶಿ ಸರ್ಕಾರದ ಕೋರಿಕೆ ಅಥವಾ ತುರ್ತು ಪರಿಸ್ಥಿತಿಯಲ್ಲಿ ಪ್ರಥಮ ಮಾಹಿತಿ ವರದಿ ಮೇರೆಗೆ (FIR) ಯಾವುದೇ ವ್ಯಕ್ತಿ ಅಪರಾಧದಿಂದ ಅಥವಾ ಕಪಟ ವ್ಯಾಪಾರದಿಂದ ಅಥವಾ ಲೂಟಿ ಹೊಡೆದ ಹಣದಿಂದ ಸ್ವಿಸ್ ಬ್ಯಾಂಕ್ ಸಂಬಂಧ ಬೆಳೆಸಿದ್ದಲ್ಲಿ ಬ್ಯಾಂಕುಗಳು ಆ ಸರ್ಕಾರಕ್ಕೆ ತಕ್ಕಂತೆ ಮಾಹಿತಿ ನೀಡುವುವು. ವಿಶ್ವವಿಖ್ಯಾತ ಸ್ಕಾಟ್ಲೆಂಡ್ ಯಾರ್ಡ್, ಎಫ್.ಬಿ.ಐ., ಕೆ.ಜಿ.ಬಿ. ಇನ್ನೂ ಮುಂತಾದ ಪತ್ತೇದಾರಿ ಸಂಸ್ಥೆಗಳು ಬಹಳ ಸಾಹಸದಿಂದ ಮಿತಿಯಾದ ಮಾಹಿತಿಯನ್ನು ಪಡೆಯಲು ಈಗ ಸಾಧ್ಯವಾಗಿದೆ. ಪ್ರಶ್ನೆಗಳ ಸರಣಿಯಲ್ಲಿ ಕೆಲವಕ್ಕೆ ಮಾತ್ರ ಏಕಾಂತದಲ್ಲಿ ಉತ್ತರ ದೊರೆಯುವುದು. ಉತ್ತರವನ್ನು ಒಂದು ಬಾರಿ ಮಾತ್ರ ಕೊಡಲಾಗುವುದು.

1982ರಲ್ಲಿ ಸ್ವಿಸ್ ಬ್ಯಾಂಕಿಂಗ್ ಸಂಹಿತೆಯಲ್ಲಿ ಇನ್ನಷ್ಟು ಬದಲಾವಣೆ ಕಂಡುಬಂದಿತು. 50,000 ಫ್ರಾಂಕುಗಳಿಗೂ ಹೆಚ್ಚಿನ ಠೇವಣಿ ಇಡುವವನು ಕಡ್ಡಾಯವಾಗಿ ಪರಿಚಯದ ಮೂಲಕವೇ ಖಾತೆ ಪ್ರಾರಂಭಿಸಬೇಕು. ಹೊಸ ಸಂಖ್ಯಾ ಖಾತೆ ವ್ಯವಹಾರಗಳನ್ನು ತಾತ್ಕಾಲಿಕವಾಗಿ ಮುಂದೂಡಲಾಯಿತು. ಅವು ಸಂಪೂರ್ಣವಾಗಿ ರದ್ದಾಗಲಿಲ್ಲ. ಇದರಿಂದಾಗಿ ಚೌರ್ಯವೃತ್ತಿಯ ಹಣ ಸ್ವಿಸ್ ಬ್ಯಾಂಕ್ ಸೇರಬೇಕಾದರೆ ಬಹಳ ಶ್ರಮಪಡಬೇಕಾಗಿ ಬಂತು. ಕಾನೂನಿನ ಚೌಕಟ್ಟಿನಲ್ಲಿ ಏನೇ ಬಿಗಿ ಅಥವಾ ಸಡಿಲಿಕೆಯಾಗಲಿ ವಿದೇಶಿ ಹಣದ ಪ್ರವಾಹವೇನೂ ಕಡಿಮೆಯಾದಂತೆ ಕಾಣುವುದಿಲ್ಲ.

ಇಡೀ ವಿಶ್ವ ಸ್ವಿಸ್ ಮೌನದ ಬಗ್ಗೆ ಆಶ್ಚರ್ಯದಿಂದ ತಲೆದೂಗಿತೇ ವಿನಾ, ''ಬೇಡ, ಇದು ಸರಿಯಲ್ಲ'' ಎಂದು ಯಾವ ರಾಷ್ಟ್ರವೂ ಹೇಳಿಲ್ಲ. ಹಿರಿಯಕ್ಕನ ಚಾಳಿ ಮನೆ ಮಕ್ಕಳಿಗೆಲ್ಲಾ ಎಂಬಂತೆ ಸೇಂಟ್ ಕಿಟ್ಸ್, ಕೇಮೂನ್ ದ್ವೀಪ, ಬರ್ಮುಡ ಪನಾಮ. ಆಸ್ಟ್ರಿಯಾ ಮುಂತಾದ ದೇಶಗಳು ಸ್ವಿಸ್ ಮಾರ್ಗವನ್ನು ಅನುಸರಿಸಿವೆ.

ಅನೇಕ ಬಾರಿ ಸಂಸತ್ತಿನಲ್ಲಿ ಬ್ಯಾಂಕ್ ಗೋಪ್ಯತೆ ಬಗ್ಗೆ ಬಿಸಿ ಹಾಗೂ ದೀರ್ಘವಾದ ಚರ್ಚೆ ನಡೆದಿದೆ. ಚಿಯಾಸ್ಸೊ ಹಗರಣ ರಾಜಕೀಯ ಪಕ್ಷಗಳ ಕಣ್ಣುಗಳನ್ನು ತೆರೆಯಿಸಿತು. ರಾಜಕೀಯ ರಂಗದಲ್ಲಿ ಪ್ರಮುಖವಾದ ವಿರೋಧ ಪಕ್ಷವೆಂದರೆ ಸಮಾಜವಾದಿ ತಂತ್ರ ಪ್ರಜಾವಾದಿಗಳು (Social democrats) ''ದೇಶಭ್ರಷ್ಟರಿಗೂ. ರಾಜಕಾರಣಿಗಳಿಗೂ ಕಳ್ಳರಿಗೂ ಸ್ವಿಸ್ ಬ್ಯಾಂಕುಗಳು ಛತ್ರವಿದ್ದಂತೆ. ಸ್ವಿಸ್ ಬ್ಯಾಂಕ್ ಗೌಪ್ಯ ವ್ಯವಸ್ಥೆ ದೇಶಕ್ಕೆ ಗೌರವ ತರುವುದಕ್ಕಿಂತ ಹೆಚ್ಚು ಹಾನಿಯನ್ನುಂಟುಮಾಡಿದೆ. ಇಂಥ ಖ್ಯಾತಿ ನಮಗೆ ಬೇಡ'' ಎಂದು ವಿರೋಧ ಪಕ್ಷ ಮತ್ತು ಕಾರ್ಮಿಕ-ಧಾರ್ಮಿಕ ಸಂಘ ಸಂಸ್ಥೆಗಳು ಸ್ವಿಸ್ ಬ್ಯಾಂಕ್ ಪ್ರವೃತ್ತಿಯನ್ನು ಕಟುವಾಗಿ ಟೀಕಿಸಿ ಖಂಡಿಸಿವೆ. ಆದರೂ ಬ್ಯಾಂಕಿಂಗ್ ಪದ್ಧತಿಯಲ್ಲಿ ತೃಪ್ತಿಕರವಾದ ಬದಲಾವಣೆಯಾಗಿಲ್ಲ. ಇದಕ್ಕೆ ಇನ್ನೂ ಒಂದು ಕಾರಣವಿದೆ. ಶೇ. 50ಕ್ಕೂ ಹೆಚ್ಚು ಸಂಸತ್ ಸದಸ್ಯರು ಬ್ಯಾಂಕ್ ವ್ಯಾಪ್ತಿ ಇರುವ ಸಂಸ್ಥೆಗಳ ನಿರ್ದೇಶಕರ ಮಂಡಲಿಯಲ್ಲಿ ವ್ಯಾಪಿಸಿದ್ದಾರೆ. ಇದರಿಂದ ಬ್ಯಾಂಕಿಂಗ್ ವಿರುದ್ಧ ಮಾಡಿದ ನಿರ್ಣಯಗಳಿಗೆ ಸಮ್ಮತಿ ಸಿಗುವುದಿಲ್ಲ. 1970-72ರ ಅವಧಿಯಲ್ಲಿ 20ಕ್ಕೂ ಹೆಚ್ಚು ವಿದೇಶಿ ಬ್ಯಾಂಕ್‌ಗಳ ಮುಳುಗಡೆಯಾದರೂ ಸ್ವಿಸ್ ಬ್ಯಾಂಕಿಂಗ್‌ಗೆ ಯಾವ ಆಘಾತವೂ ಆಗಲಿಲ್ಲ. ಸ್ವಿಸ್ ರಾಷ್ಟ್ರೀಯ ಬ್ಯಾಂಕ್ ಹಾಗೂ ಸ್ವಿಸ್ ಬ್ಯಾಂಕುಗಳ ಮಹಾ ಸಂಘ ಅತ್ಯಂತ ಶಕ್ತಿಶಾಲಿಯಾದುದು ಮತ್ತು ಅದ್ವಿತೀಯವಾದುದು. ಸಾಂಪ್ರದಾಯಿಕವಾಗಿ ನಡೆಸಿಕೊಂಡು ಬಂದಿರುವ ಪದ್ಧತಿಯನ್ನು ಕೈ ಬಿಡಲು ಯಾವ ದೇಶವೂ ಇಚ್ಛೆ ಪಡುವುದಿಲ್ಲ. ಜಿಬ್ರಾಲ್ಟರಿನ ಬಂಡೆಗಲ್ಲಿನಂತೆ ಸ್ವಿಸ್ ಬ್ಯಾಂಕುಗಳು ಗೌಪ್ಯ ಪ್ರವೃತ್ತಿಯ ವಿರುದ್ಧ ಏನೇ ಅಡಚಣೆ ಬರಲಿ, ಆದನ್ನು ಧೈರ್ಯದಿಂದ ಎದುರಿಸಿ ತಮ್ಮ ಮೌನವ್ರತವನ್ನು ಉಚ್ಚಸ್ಥಾನದಲ್ಲಿರಿಸಿವೆ.



# ಅಂತರರಾಷ್ಟ್ರೀಯ ಬ್ಯಾಂಕಿಂಗ್ ಬೇಸಗೆ ಶಾಲೆ

**ನಾನಾ ದೇಶಗಳ ಉನ್ನತ ಭವಸಾಮರ್ಥ್ಯವುಳ್ಳ ಬ್ಯಾಂಕ್ ಅಧಿಕಾರಿಗಳನ್ನು ಒಟ್ಟುಗೂಡಿಸುವ ಬ್ಯಾಂಕಿಂಗ್ ಬೆಳವಣಿಗೆಯ ಅಧ್ಯಯನಕ್ಕೆ ಚಾಲನೆ ನೀಡುವ ಪರಸ್ಪರ ಅರಿವು ಮೂಡಿಸುವ ಉದ್ದೇಶವುಳ್ಳ ಬೇಸಗೆ ಶಾಲೆಯ ಪರಿಚಯ**


**ಟಿ. ಕೆ. ರಂಗನಾಥ**
ವ್ಯವಸ್ಥಾಪಕರು
ಭಾರತೀಯ ಸ್ಟೇಟ್ ಬ್ಯಾಂಕ್
ರೇಸ್‌ಕೋರ್ಸ್ ರಸ್ತೆ ಶಾಖೆ, ಬೆಂಗಳೂರು–1


### ಹಿನ್ನೆಲೆ

ಅಂತರರಾಷ್ಟ್ರೀಯ ಬ್ಯಾಂಕಿಂಗ್ ಬೇಸಗೆ ಶಾಲೆ 'ಐಬಿಎಸ್‌ಎಸ್' ಎಂಬ ಆದ್ಯಕ್ಷರಗಳಿಂದ ವಿಶ್ವಾದಾದ್ಯಂತ ಜನಪ್ರಿಯವಾಗಿದೆ. ಎರಡನೇ ಮಹಾಯುದ್ಧದ ತರುವಾಯ ಅಂತರರಾಷ್ಟ್ರೀಯ ಸಹಕಾರಕ್ಕೆ ತನ್ನನ್ನು ಬದ್ಧಗೊಳಿಸಿಕೊಂಡಿದ್ದ ಇನ್ಸ್ಟಿಟ್ಯೂಟ್ ಆಫ್ ಬ್ಯಾಂಕರ್ಸ್, ಲಂಡನ್ (ಈಗ ಚಾರ್ಟರ್ಡ್ ಇನ್ಸ್ಟಿಟ್ಯೂಟ್ ಆಫ್ ಬ್ಯಾಂಕರ್ಸ್) 1948ರಲ್ಲಿ ಮೊಟ್ಟಮೊದಲನೆಯ ಬೇಸಗೆ ಶಾಲೆಯನ್ನು ಸಂಘಟಿಸಿತು. 1948ರ ಸೆಪ್ಟೆಂಬರ್ ತಿಂಗಳಿನಲ್ಲಿ ಕ್ರೈಸ್ಟ್‌ಚರ್ಚ್, ಆಕ್ಸ್‌ಫರ್ಡ್, ಇಂಗ್ಲೆಂಡ್‌ನಲ್ಲಿ ನಡೆದ ಬ್ಯಾಂಕಿಂಗ್ ಬೇಸಗೆ ಶಾಲೆಯಲ್ಲಿ ಪ್ರಸ್ತುತ ಬ್ಯಾಂಕಿಂಗ್ ವಿಚಾರಗಳ ಬಗ್ಗೆ ಹಲವಾರು ಪ್ರಮುಖ ಬ್ಯಾಂಕರುಗಳಿಂದ ಪ್ರಬಂಧ ಮಂಡನೆಯ ಜೊತೆಗೆ, ಪ್ರತಿನಿಧಿಗಳೂ ಸಕ್ರಿಯವಾಗಿ ಭಾಗವಹಿಸಲು ಅನುಕೂಲವಾಗುವಂತೆ ತಂಡಗಳಲ್ಲಿ ಚರ್ಚಾಗೋಷ್ಠಿಗೂ ಅವಕಾಶ ನೀಡಲಾಯಿತು. ಹೀಗಾಗಿ ಉಪನ್ಯಾಸಗಳ ಜೊತೆಗೆ ಚರ್ಚೆಯ ಅವಕಾಶವೂ ದೊರೆತು ಉನ್ನತಮಟ್ಟದ ಭಾಗವಹಿಸುವಿಕೆಯನ್ನು ಖಾತರಿಪಡಿಸಿಕೊಳ್ಳಲಾಯಿತು. ಮೊದಲ ಬೇಸಗೆ ಶಾಲೆಯಲ್ಲಿ ಸ್ಕಾಟ್ಲೆಂಡ್, ಐರ್ಲೆಂಡ್, ಆಸ್ಟ್ರೇಲಿಯಾ, ಕೆನಡಾ, ಹಾಗೂ ಭಾರತದ ಬ್ಯಾಂಕರುಗಳ ಇನ್ಸ್ಟಿಟ್ಯೂಟ್‌ಗಳ ನಾಮಕರಣಗೊಂಡ ಪ್ರತಿನಿಧಿಗಳೇ ಅಲ್ಲದೆ ಪಶ್ಚಿಮ ಹಾಗೂ ಪೂರ್ವ ಯುರೋಪ್, ಮಧ್ಯಪ್ರಾಚ್ಯ ಹಾಗೂ ಅಮೆರಿಕ ಸಂಯುಕ್ತ ಸಂಸ್ಥಾನದ ಬ್ಯಾಂಕ್‌ಗಳಿಂದಲೂ ಪ್ರತಿನಿಧಿಗಳು ಭಾಗವಹಿಸಿದ್ದರು. 31 ದೇಶಗಳಿಗೆ ಸೇರಿದ 108 ಬ್ಯಾಂಕರರು ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಬ್ಯಾಂಕಿಂಗ್ ವಿಚಾರಗಳ ಬಗ್ಗೆ ಸ್ನೇಹಪರ ವಾತಾವರಣದಲ್ಲಿ ವಿಮರ್ಶಾತ್ಮಕವಾಗಿ ವಿಶದವಾಗಿ ಚರ್ಚಿಸಲು ಅವಕಾಶ ಪಡೆದರು. ಮೊದಲ ಶಾಲೆಯ ಯಶಸ್ಸಿನಿಂದ ಉತ್ತೇಜಿತರಾದ ಆಡಳಿತ ಮಂಡಳಿ ವರ್ಷಕ್ಕೊಂದು ಬೇಸಗೆ ಶಾಲೆ ನಡೆಸಲು ನಿರ್ಧರಿಸಿತು. 1949ರಲ್ಲೂ ಇಂಗ್ಲೆಂಡ್‌ನ ಕ್ರೈಸ್ಟ್‌ಚರ್ಚ್‌ನಲ್ಲಿ ಶಾಲೆ ನಡೆಯಿತು. 1950ರಿಂದ ಈಚೆಗೆ ಪ್ರಮುಖ ವಿದೇಶಿ ಹಣಕಾಸು ಕೇಂದ್ರಗಳಲ್ಲಿ ಬೇಸಗೆ ಶಾಲೆ ನಡೆಸಲ್ಪಡುತ್ತಿದೆ. 41ನೆಯ ಐಬಿಎಸ್‌ಎಸ್ ಸೇರಿದಂತೆ ಒಟ್ಟು 20 ವಿವಿಧ ದೇಶಗಳಲ್ಲಿ ಐಬಿಎಸ್‌ಎಸ್ ನಡೆಸಲ್ಪಟ್ಟಿದ್ದು ಅತಿ ಹೆಚ್ಚು ಬಾರಿ ಸಂಘಟಿಸಿದ ಕೀರ್ತಿ 10 ಬಾರಿ ಸಂಘಟಿಸಿದ ಇಂಗ್ಲೆಂಡಿಗೆ ಸಲ್ಲುತ್ತದೆ. ಲಂಡನ್ನಿನ ಚಾರ್ಟರ್ಡ್ ಇನ್ಸ್ಟಿಟ್ಯೂಟ್ ಆಫ್ ಬ್ಯಾಂಕರ್ಸ್ ಪ್ರಮುಖ ಸಂಘಟಕನ ಸ್ಥಾನ ಪಡೆದಿರುವುದಲ್ಲದೇ ಅದರ ಕಾರ್ಯದರ್ಶಿ ಹಾಗೂ ಸಿಬ್ಬಂದಿ ಎಲ್ಲಾ ಬ್ಯಾಂಕಿಂಗ್ ಬೇಸಗೆ ಶಾಲೆಗಳ ಸಲಹೆಗಾರರಾಗಿ ಕಾರ್ಯ ನಿರ್ವಹಿಸುತ್ತಾರೆ. ಬೇಸಗೆ ಶಾಲೆಗಳನ್ನು ಯೋಜಿಸುವ ಹೊಣೆ ಚಾರ್ಟರ್ಡ್ ಇನ್ಸ್ಟಿಟ್ಯೂಟ್ ಆಫ್ ಬ್ಯಾಂಕರ್ಸ್‌ನದೇ. ಐಬಿಎಸ್‌ಎಸ್‌ನ ಆಡಳಿತ ಮಂಡಳಿ ಚಾರ್ಟರ್ಡ್ ಇನ್ಸ್ಟಿಟ್ಯೂಟ್ ಆಫ್ ಬ್ಯಾಂಕರ್ಸ್‌ನ ಪ್ರಧಾನ ಕಾರ್ಯದರ್ಶಿಯವರ ಜೊತೆಗೆ 20 ಬ್ಯಾಂಕರ್‌ಗಳ ಸಂಸ್ಥೆಯ ಪ್ರತಿನಿಧಿಗಳನ್ನೂ ಹೊಂದಿದೆ.

### ಬೇಸಗೆ ಶಾಲೆಯ ಉದ್ದೇಶಗಳು

ಬೇಸಗೆ ಶಾಲೆ ಮೂರು ಪ್ರಮುಖ ಉದ್ದೇಶಗಳನ್ನು ಹೊಂದಿದೆ. ಅವುಗಳೆಂದರೆ:

(ಅ) ಬೇರೆ ಬೇರೆ ದೇಶಗಳ ಉನ್ನತ ಭಾವ ಸಾಮರ್ಥ್ಯವುಳ್ಳ ಬ್ಯಾಂಕ್ ಅಧಿಕಾರಿಗಳನ್ನು ಒಟ್ಟುಗೂಡಿಸುವುದು.

(ಆ) ಬ್ಯಾಂಕಿಂಗ್‌ನ ಪ್ರಮುಖ ಬೆಳವಣಿಗೆಗಳ ಬಗ್ಗೆ ಅಧ್ಯಯನವನ್ನು ಪ್ರವರ್ತಿಸುವುದು.

(ಇ) ವ್ಯಕ್ತಿಗಳ ನಡುವಣ ಸಂಬಂಧವನ್ನು ನಿಕಟಗೊಳಿಸುವುದರ ಜೊತೆಗೆ ಪರಸ್ಪರ ಅರಿವನ್ನು ಹೆಚ್ಚಿಸುವುದು.

### ಸದಸ್ಯತ್ವದ ನಿಯಮಗಳು

ಬೇಸಗೆ ಶಾಲೆಯಲ್ಲಿ ಭಾಗವಹಿಸಲು ಹೆಚ್ಚಿನ ಬೇಡಿಕೆ ಇದ್ದಾಗ್ಯೂ ವ್ಯಕ್ತಿಪರ ವಾತಾವರಣವನ್ನು ಉಳಿಸಿಕೊಳ್ಳುವ ಉದ್ದೇಶದಿಂದ ಭಾಗಿಗಳ ಸಂಖ್ಯೆಯನ್ನು 250ಕ್ಕೆ ಮಿತಿಗೊಳಿಸಲು ಆಡಳಿತ ಮಂಡಳಿ ನಿರ್ಧರಿಸಿದೆ. ಪ್ರಸ್ತುತ 98 ದೇಶಗಳಿಂದ ಹಾಗೂ ಅಂತರರಾಷ್ಟ್ರೀಯ ಸಂಸ್ಥೆಗಳಿಂದ ನಿರ್ದಿಷ್ಟ ಸಂಖ್ಯೆಯಲ್ಲಿ ಭಾಗಿಗಳನ್ನು ನಾಮಕರಣ ಮಾಡಲು ಆಡಳಿತ ಮಂಡಳಿ ಆದೇಶ ನೀಡಿದೆ. ಶಾಲೆಯಲ್ಲಿ ಭಾಗವಹಿಸಲು ನಾಮಕರಣಗೊಳ್ಳುವ ಸದಸ್ಯರು

(ಕ) 30ರಿಂದ 40 ವರ್ಷ ವಯೋಮಾನದವರಾಗಿರಬೇಕು.

(ಖ) ತಾವು ಪ್ರತಿನಿಧಿಸುವ ದೇಶದ ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ಸಾಕಷ್ಟು ವ್ಯವಸ್ಥಾಪನಾನುಭವ ಹೊಂದಿರಬೇಕಲ್ಲದೆ ಪ್ರಧಾನ ವ್ಯವಸ್ಥಾಪಕ ದರ್ಜೆಗೆ ಮುಂದೆ ಬಡ್ತಿ ಹೊಂದುವ ಅವಕಾಶ ಹೊಂದಿರಬೇಕು. ಅಂತರರಾಷ್ಟ್ರೀಯ ಬ್ಯಾಂಕಿಂಗ್‌ನಲ್ಲಿ ಸ್ವಲ್ಪ ಅನುಭವ ಅಪೇಕ್ಷಣೀಯ.

(ಗ) ಶಾಲೆಯ ನಡಾವಳಿಗಳಲ್ಲಿ ಪೂರ್ಣವಾಗಿ ಭಾಗವಹಿಸಲು ಅನುಕೂಲವಾಗುವಂತೆ ಸಾಕಷ್ಟು ಇಂಗ್ಲಿಷ್ ಭಾಷೆಯ ಪ್ರಾವೀಣ್ಯ ಹೊಂದಿರಬೇಕು.

(ಘ) ಹಿಂದಿನ ಬ್ಯಾಂಕಿಂಗ್ ಬೇಸಗೆ ಶಾಲೆಗಳಲ್ಲಿ ಭಾಗವಹಿಸಿರಬಾರದು.

(ಙ) ಸಮಾಜವಾದಿ ಬ್ಯಾಂಕಿಂಗ್ ವ್ಯವಸ್ಥೆಯುಳ್ಳ ದೇಶಗಳನ್ನು ಹೊರತುಪಡಿಸಿ ಇತರ ದೇಶಗಳ ಬ್ಯಾಂಕುಗಳು ಒಂದಕ್ಕಿಂತ ಹೆಚ್ಚು ಪ್ರತಿನಿಧಿಯನ್ನು ನಾಮಕರಣ ಮಾಡುವಂತಿಲ್ಲ.

(ಚ) ನಾಮಕರಣಗೊಂಡ ಸದಸ್ಯರು ಬೇಸಗೆ ಶಾಲೆಯಲ್ಲಿ ಪೂರ್ಣಾವಧಿ ಭಾಗವಹಿಸಬೇಕು. ಪೂರ್ಣವಾಗಿ ಭಾಗವಹಿಸಿದ ದೇಶಗಳಿಗೆ ಮುಂದಿನ ಬೇಸಗೆ ಶಾಲೆಗಳಲ್ಲಿ ನಾಮಕರಣಕ್ಕೆ ಅವಕಾಶ ಸಿಗದಿರುವ ಸಾಧ್ಯತೆ ಇರುತ್ತದೆ.

(ಛ) ನಾಮಕರಣಗೊಂಡ ಬ್ಯಾಂಕರುಗಳ ಕುಟುಂಬದ ಸದಸ್ಯರಿಗೆ (ಪತಿ/ಪತ್ನಿಯೂ ಸೇರಿದಂತೆ) ಶಾಲೆಯಲ್ಲಿ ಭಾಗವಹಿಸಲು ಅವಕಾಶವಿಲ್ಲ.

### ಶಾಲೆ ನಡೆಸಲು ಸ್ಥಳ ಹಾಗೂ ಇತರ ವ್ಯವಸ್ಥೆಗಳು

ಶಾಲೆ ನಡೆಯುವ ಸ್ಥಳ ಆಕರ್ಷಕ ಹಿನ್ನೆಲೆ ಹೊಂದಿದ್ದು ಚಿತ್ತ ಚಾಂಚಲ್ಯಕ್ಕೆ ಹೆಚ್ಚಿನ ಅವಕಾಶಗಳು ಇರದೆ, ಅತ್ಯಂತ ದೂರದ ಪ್ರದೇಶ ಆಗಿರಬಾರದು. ಅಲ್ಲದೆ ಪ್ರದೇಶದ ಹವಾಗುಣ ಹಿತಕರ

ವಾದದ್ದಿರಬೇಕು. ಭಾಗಿಗಳ ಮನೋರಂಜನೆಗೆ ಅಗತ್ಯ ಸೌಲಭ್ಯಗಳನ್ನು ಹೊಂದಿರಬೇಕು. ಒಂದೇ ಆವರಣದಲ್ಲಿ ವಸತಿಯು ಕೊಠಡಿಗಳು, ಚರ್ಚಾ ಕೊಠಡಿಗಳು, ಪೂರ್ಣಾಧಿವೇಶನದ ಹಜಾರ, ಊಟದ ತೊಟ್ಟಿಗಳನ್ನು ಹೊಂದಿರಬೇಕು.

## ಶಾಲೆಯ ಕಾರ್ಯಕ್ರಮಗಳು

ಪ್ರತಿ ಬೇಸಗೆ ಶಾಲೆ ಚರ್ಚಿಸಲು 'ಪ್ರಮುಖ ವಿಚಾರ'ವನ್ನು ಆರಿಸಿಕೊಳ್ಳುತ್ತದೆ. ಈ ಪ್ರಮುಖ ವಿಚಾರಕ್ಕೆ ಸಂಬಂಧಿಸಿದಂತೆ ಆತಿಥೇಯ ರಾಷ್ಟ್ರದ ಹಾಗೂ ಅತಿಥಿರಾಷ್ಟ್ರಗಳ ಬ್ಯಾಂಕಿಂಗ್ ತಜ್ಞರು ಎಂಟೊಂಬತ್ತು ಪ್ರಮುಖ ಪ್ರಬಂಧಗಳನ್ನು ಮಂಡಿಸುತ್ತಾರೆ. ಶಾಲೆಯ ಸಂಘಟಕರು ಪ್ರಮುಖ ವಿಚಾರವನ್ನು ನಿರ್ಧರಿಸುವ ಅಧಿಕಾರ ಪಡೆದಿರುತ್ತಾರೆ. ಆದರೆ 'ಪ್ರಮುಖ ವಿಚಾರ' ಕಳೆದ ಐದು ಬೇಸಗೆ ಶಾಲೆಯ 'ಪ್ರಮುಖ ವಿಚಾರಕ್ಕಿಂತ' ಭಿನ್ನವಾದುದು ಆಗಿರಬೇಕು. ಪ್ರಬಂಧ ಮಂಡನೆಯ ಅನಂತರ ಗುಂಪು ಚರ್ಚೆ ಹಾಗೂ ಸಮಿತಿ ಚರ್ಚೆಗೆ ಅವಕಾಶ ಇರುತ್ತದೆ. ಪ್ರಮುಖ ವಿಚಾರಕ್ಕೆ ಸಂಬಂಧಿಸಿದಂತೆ ಗುಂಪುಗಳಲ್ಲಿ ಚರ್ಚೆಗಾಗಿ ಹಲವು ವಿಷಯಗಳ ಬಗ್ಗೆ ವ್ಯಾಪಕ ಪಠ್ಯಕ್ರಮವನ್ನು ಸಿದ್ಧಪಡಿಸಲಾಗುತ್ತದೆ. ಗುಂಪುಗಳಲ್ಲಿ ಚರ್ಚೆಗಾಗಿ ಹಲವು ಪ್ರಕರಣಾಧ್ಯಯನಗಳನ್ನು ಸಿದ್ಧಪಡಿಸಲಾಗುತ್ತದೆ. ಶಾಲೆಯಲ್ಲಿ ಭಾಗವಹಿಸುವವರನ್ನು ಸುಮಾರು 15 ಜನಗಳ ಗುಂಪುಗಳಾಗಿ ವಿಂಗಡಿಸಲಾಗುತ್ತದೆ. ಗುಂಪುಗಳ ನೇತೃತ್ವವನ್ನು ಅತಿಥೇಯ ರಾಷ್ಟ್ರದ ಹಿರಿಯ ಬ್ಯಾಂಕರರು ವಹಿಸಿ ಚರ್ಚೆಗೆ ನಿರ್ದಿಷ್ಟ ರೂಪುಗೊಡಲು ಹಾಗೂ ಪಠ್ಯಕ್ರಮದಲ್ಲಿ ಸೂಚಿಸಿರುವ ಎಲ್ಲಾ ಆಯಾಮಗಳಿಂದಲೂ ಚರ್ಚೆ ನಡೆಯಲು ಸಹಾಯ ಮಾಡುತ್ತಾರೆ.

ಶಾಲೆಯಲ್ಲಿ ಮಂಡಿಸಿದ ಎಲ್ಲ ಪ್ರಬಂಧಗಳು, ಗುಂಪು ಚರ್ಚೆಗಾಗಿ ಸಿದ್ಧಪಡಿಸಿದ ಪಠ್ಯಕ್ರಮ, ಪ್ರಕರಣಾಧ್ಯಯನಗಳನ್ನೂ ಪುಸ್ತಕ ರೂಪದಲ್ಲಿ ಸಿದ್ಧಪಡಿಸಿ ಶಾಲೆಯ ಮುಕ್ತಾಯ ದಿನದಂದು ಎಲ್ಲಾ ಭಾಗಗಳಿಗೆ ನೀಡಲಾಗುತ್ತದೆ.

## ಪಠ್ಯೇತರ ಚಟುವಟಿಕೆಗಳು

ಬೇಸಗೆ ಶಾಲೆಯ ಮುಖ್ಯ ಗುರಿ ಶೈಕ್ಷಣಿಕವಾದದ್ದೇ ಆದರೂ ಭಾಗಿಗಳು ಪರಸ್ಪರ ಅರಿತುಕೊಳ್ಳಲು ಸಹಾಯಕವಾಗುವಂತೆ ಹಾಗೂ ತಾವು ಭೇಟಿ ನೀಡಿದ ರಾಷ್ಟ್ರದ ಬಗ್ಗೆ ಅರಿಯಲು ಅನುವಾಗಲು ಹಲವು ಕಾರ್ಯಕ್ರಮಗಳನ್ನು ರೂಪಿಸಲಾಗುತ್ತದೆ. ಆತಿಥೇಯ ರಾಷ್ಟ್ರದ ಕೈಗಾರಿಕಾ ಹಾಗೂ ಸಾಂಸ್ಕೃತಿಕ ಜೀವನದ ಕಿರುಪರಿಚಯ ಮಾಡಿಕೊಡಲು ಹಲವು ಪ್ರವಾಸಗಳನ್ನು ಏರ್ಪಡಿಸಲಾಗುತ್ತದೆ. ಆಟೋಟ, ಸಾಂಸ್ಕೃತಿಕ ಕಾರ್ಯಕ್ರಮ ರಾಷ್ಟ್ರೀಯ ಔತಣಕೂಟಗಳಿಗೂ ಶಾಲೆಯ ವೇಳಾ ಪಟ್ಟಿಯಲ್ಲಿ ಸ್ಥಾನವಿದೆ.

## ಭಾರತದ ಬ್ಯಾಂಕಿಂಗ್ ಬೇಸಗೆ ಶಾಲೆ

ನವದೆಹಲಿಯಲ್ಲಿ 1988ರ ಸೆಪ್ಟೆಂಬರ್ 17ರಿಂದ 30ರ ವರೆಗೆ ನಡೆದ ನಲವತ್ತೊಂದನೆಯ ಬ್ಯಾಂಕಿಂಗ್ ಶಾಲೆಯಲ್ಲಿ 47 ರಾಷ್ಟ್ರಗಳ 184 ಬ್ಯಾಂಕರುಗಳು ಭಾಗವಹಿಸಿದ್ದರು. ಇದರಲ್ಲಿ ಭಾಗಿಯಾದ ಭಾರತದ ಬ್ಯಾಂಕರುಗಳ ಸಂಖ್ಯೆ 20. ಭಾರತದ ಬ್ಯಾಂಕರುಗಳನ್ನು ಬಿಟ್ಟರೆ ಇಂಗ್ಲೆಂಡಿನ 13 ಬ್ಯಾಂಕರುಗಳ ತಂಡವೇ ಅತಿ ಹೆಚ್ಚಿನ ಬ್ಯಾಂಕರುಗಳ ತಂಡ. ತೃತೀಯ ಜಗತ್ತಿನ 45 ಬ್ಯಾಂಕರುಗಳು ಈ ಬೇಸಗೆ ಶಾಲೆಯಲ್ಲಿ ಭಾಗವಹಿಸಿದ್ದರು. ಭಾಗಿಗಳನ್ನು 15 ತಂಡಗಳಾಗಿ ವಿಭಜಿಸಿ ಪ್ರತಿ ತಂಡಕ್ಕೂ ಭಾರತದ ನದಿಯೊಂದರ ಹೆಸರು ನೀಡಲಾಗಿತ್ತು (ಗಂಗೆ, ಯಮುನೆಯರ ಜೊತೆಗೆ ಕರ್ನಾಟಕದ ಕಾವೇರಿ ಕೃಷ್ಣೆಯರಿಗೂ ಅಲ್ಲಿ ಸ್ಥಾನವಿತ್ತು) ಶಾಲೆಯ ಉದ್ಘಾಟನೆಯನ್ನು ಭಾರತೀಯ ರಿಸರ್ವ್ ಬ್ಯಾಂಕಿನ ಗವರ್ನರ್ ಆರ್. ಎನ್. ಮಲ್ಹೋತ್ರ ನೆರವೇರಿಸಿದರು. ಉದ್ಘಾಟನಾ ಸಮಾರಂಭದ ಮುಖ್ಯ ಅತಿಥಿಗಳಾಗಿ ಕೇಂದ್ರ ವಿತ್ತ ಸಚಿವ ಎಸ್. ಬಿ. ಚವ್ಹಾಣ್ ಹಾಜರಿದ್ದರು.

## ಪ್ರಮುಖ ವಿಚಾರ

41ನೆಯ ಬೇಸಗೆ ಬ್ಯಾಂಕಿಂಗ್ ಶಾಲೆಗೆ "ಬ್ಯಾಂಕಿಂಗ್ ಹಾಗೂ ಆರ್ಥಿಕ ಅಭಿವೃದ್ಧಿ"ಯನ್ನು 'ಪ್ರಮುಖ ವಿಚಾರ'ವಾಗಿ ಆರಿಸಲಾಗಿತ್ತು. ಈ ವಿಷಯಕ್ಕೆ ಸಂಬಂಧಿಸಿದಂತೆ 9 ಪ್ರಬಂಧಗಳನ್ನು ಮಂಡಿಸಲಾಯಿತು. ಅವುಗಳು ಈ ರೀತಿ ಇವೆ:

1 ಕೇಂದ್ರ ಬ್ಯಾಂಕಿಂಗ್ ಹಾಗೂ ಆರ್ಥಿಕ ಅಭಿವೃದ್ಧಿ: ಭಾರತದ ಅನುಭವ
—ಡಾ. ಸಿ. ರಂಗರಾಜನ್, ಉಪ ಗೌರ್ನರ್, ಭಾರತೀಯ ರಿಸರ್ವ್ ಬ್ಯಾಂಕ್

2 ವಾಣಿಜ್ಯಕ ಬ್ಯಾಂಕಿಂಗ್: ಬದಲಾಗುತ್ತಿರುವ ಜಾಗತಿಕ ದೃಶ್ಯಾವಳಿ
—ಜಾನ್ ಜೆ. ಕ್ವಿಂಟನ್. ಅಧ್ಯಕ್ಷರು, ಬ್ಯಾರ್ಕ್ಲೇಸ್ ಬ್ಯಾಂಕ್

3 ಅಂತರರಾಷ್ಟ್ರೀಯ ಹಣಕಾಸು ವ್ಯವಸ್ಥೆಯ ಸುಧಾರಣೆಗಳು
—ಡಾ॥ ವರ್ಣಸೇನ ರಾಸಪುತ್ರ, ಗವರ್ನರ್ ಸೆಂಟ್ರಲ್ ಬ್ಯಾಂಕ್ ಆಫ್ ಸಿಲೋನ್

4 ವಾಣಿಜ್ಯಕ ಬ್ಯಾಂಕಿಂಗ್: ಭಾರತದ ಅನುಭವ
—ಡಾ॥ ಡಿ. ಎಸ್. ಘೋಷ್, ಅಧ್ಯಕ್ಷರು, ಭಾ.ಸ್ಟೇ.ಬ್ಯಾಂ.

5 ಬ್ಯಾಂಕಿಂಗ್ ಹಾಗೂ ಆರ್ಥಿಕ ಅಭಿವೃದ್ಧಿ: ಜಪಾನಿನ ಅನುಭವ
—ಶ್ರೀ ಹಿಜುರೋ ಒಗೋಟ, ಉಪ ಗವರ್ನರ್, ಜಪಾನ್ ಡೆವಲಪ್‌ಮೆಂಟ್ ಬ್ಯಾಂಕ್.

6 ಅಂತರರಾಷ್ಟ್ರೀಯ ಸಾಲ ಮತ್ತು ಆರ್ಥಿಕ ಅಭಿವೃದ್ಧಿ
—ಶ್ರೀ ರಾಬರ್ಟ್ ಜೆ. ಹೈಟ್ ನಿರ್ದೇಶಕರು ವೆಸ್ಟ್‌ಪಾಕ್ ಬ್ಯಾಂಕಿಂಗ್ ಕಾರ್ಪ್

7 ಬಂಡವಾಳ ಮಾರುಕಟ್ಟೆ ಮತ್ತು ಆರ್ಥಿಕ ಅಭಿವೃದ್ಧಿ
—ಫಿಲಿಫ್ ಜೆ. ಲಾಸಿಟರ್, ಗ್ರೂಪ್ ಎಕ್ಸಿಕ್ಯೂಟಿವ್, ಸಿಟಿ ಕಾರ್ಪ್ ಇಂಟರ್‌ನ್ಯಾಷನಲ್ ಗ್ರೂಪ್ ಇಫ್ಸ್

8 ಹಣಕಾಸು ನೀತಿ : ಮರುಭೇಟಿ
—ಡಾ॥ ಐ. ಜೆ. ಪಟೇಲ್, ನಿರ್ದೇಶಕರು, ಲಂಡನ್ ಸ್ಕೂಲ್ ಆಫ್ ಎಕನಾಮಿಕ್ಸ್

9 ಅಭಿವೃದ್ಧಿಗಾಗಿ ಬ್ಯಾಂಕಿಂಗ್‌ನಲ್ಲಿ ಸ್ಪರ್ಧೆ ಮತ್ತು ವಿನಿಯಮನ
—ನರಸಿಂಹನ್, ಉಪಾಧ್ಯಕ್ಷರು, ವಿಶ್ವ ಅಭಿವೃದ್ಧಿ ಬ್ಯಾಂಕ್

## ಗುಂಪು ಚರ್ಚೆ

ಮೇಲೆ ಸೂಚಿಸಿದ ಪ್ರಬಂಧಗಳ ಮೇಲಣ ಚರ್ಚೆ/ಪ್ರಶ್ನೋತ್ತರಗಳ ಜೊತೆಗೆ ಗುಂಪುಚರ್ಚೆಗಾಗಿ ಕೆಳಕಂಡ ಐದು ವಿಷಯಗಳ ಬಗ್ಗೆ ಪಠ್ಯಕ್ರಮ ಆಧಾರಿತ ಚರ್ಚೆ ನಡೆಯಿತು.

1 ಗ್ರಾಮೀಣ ಅಭಿವೃದ್ಧಿಗೆ ಹಣಸಹಾಯ ನೀಡಿಕೆ
2 ಬ್ಯಾಂಕುಗಳಲ್ಲಿ ಮಾನವ ಸಂಪನ್ಮೂಲದ ವ್ಯವಸ್ಥಾಪನ
3 ಅಭಿವೃದ್ಧಿಶೀಲ ಅರ್ಥವ್ಯವಸ್ಥೆಯಲ್ಲಿ ಬ್ಯಾಂಕಿಂಗ್
4 ವಿತ್ತೀಯ ನವೋನ್ಮೇಷಣ (financial Innovation) ಹಾಗೂ ಆರ್ಥಿಕ ಸಾಧನೆ
5 ವಿತ್ತೀಯ ಉಸ್ತುವಾರಿ (Financial supervision) ಹಾಗೂ ವಿನಿಯಮನ

12 ಜನ ಸದಸ್ಯರನ್ನು ಹೊಂದಿದ್ದ ಪ್ರತಿ ಗುಂಪೂ ಪ್ರತ್ಯೇಕವಾಗಿ ಎಲ್ಲ ವಿಷಯಗಳ ಬಗ್ಗೆ ಚರ್ಚಿಸಿ ಭಾಗಿಗಳಾಗಿ ಇತ್ತೀಚಿನ ಪ್ರವೃತ್ತಿಗಳ ಪರಿಚಯ ನೀಡುವಲ್ಲಿ ಸಫಲವಾದುವು. ಗ್ರಾಮೀಣ ಅಭಿವೃದ್ಧಿಗೆ ಹಣ ಸಹಾಯ ನೀಡಿಕೆ ವಿಷಯದ ಪಠ್ಯಕ್ರಮ ಕೆಳಕಂಡಂತಿತ್ತು.

1 ಗ್ರಾಮೀಣಾಭಿವೃದ್ಧಿ ಪ್ರಕ್ರಿಯೆ
ಉದರಿಯ ಕೊರತೆ ಹಾಗೂ ಗ್ರಾಮೀಣ ಹಿಂದುಳಿದಿರುವಿಕೆ
ತತ್ಸಂಬಂಧ ಕಾರಣಗಳು ಹಾಗೂ ಅವುಗಳ ಪ್ರಸಕ್ತತೆ
ಗ್ರಾಮೀಣಾಭಿವೃದ್ಧಿ ಮತ್ತು ಬ್ಯಾಂಕಿಂಗ್ ನಡುವಣ ಕೊಂಡಿ

2 ಸಂಸ್ಥಾ ಉದರಿಯ ಪಾತ್ರ
ಅಭಿವೃದ್ಧಿ ಪರಿಯೋಜನೆಗಳಲ್ಲಿ ವಿನಿಯೋಜನೆ, ಸುಲಭದರದ ಸಾಲ ಹಾಗೂ ಅನಿಶ್ಚಿತ ಗಳಿಕೆ
ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಭಾಗವಹಿಸುವಿಕೆ

3 ಗ್ರಾಮೀಣ ಉದರಿಯ ಹರಿವು
ಪದ್ಧತಿ ಹಾಗೂ ನಿರ್ಬಂಧಗಳು
ಬಹು ಅಭಿಕರಣ ಅಭಿಗಮನ
ಉದರಿ ಬಟವಾಡೆ ವ್ಯವಸ್ಥೆಯ ನವೋನ್ಮೇಷಗಳು

4 ಸಂಸ್ಥೆಗಳ ಹಂದರ
ಕೇಂದ್ರ ಬ್ಯಾಂಕ್‌ನ ಒತ್ತಾಸೆ
ಸರಕಾರಿ ಧೋರಣೆಗಳ ಪ್ರಭಾವ
ನಷ್ಟಸಂಭಾವ್ಯತೆ ಹಂಚಿಕೊಳ್ಳುವ ಅಭಿಕರಣಗಳ ಒತ್ತಾಸೆ

5 ಬದಲಾವಣೆ ಹರಿಕಾರನಾಗಿ ಬ್ಯಾಂಕ್: ಕಾರ್ಯಸಿದ್ಧಿ
ಗ್ರಾಮೀಣ ನೌಕರಿ ಹಾಗೂ ವರಮಾನದ ವಿಸ್ತರಣೆ
ಗ್ರಾಮೀಣ ಉಳಿತಾಯಕ್ಕೆ ಉತ್ತೇಜನ
ಗ್ರಾಮೀಣ ಜೀವನದಲ್ಲಿ ಬದಲಾವಣೆಗೆ ಕೊಡುಗೆಗಳು

## ಪ್ರಶ್ನೆಗಳು

1 ಗ್ರಾಮೀಣ ಅಭಿವೃದ್ಧಿಯನ್ನು ಪ್ರವರ್ತಿಸಲು ಇರುವ ವಿವಿಧ ತಂತ್ರವ್ಯೂಹಗಳಾವುವು?
2 ಗ್ರಾಮೀಣ ಅಭಿವೃದ್ಧಿಗೆ ಹಣಕಾಸು ಒದಗಿಸಲು ಇರುವ ಪರ್ಯಾಯ ಅಭಿಗಮನಗಳು ?
3 ಪರಿಣಾಮಕಾರಿ ಗ್ರಾಮೀಣ ಬ್ಯಾಂಕಿಂಗ್‌ಗೆ ಯಾವ ತೆರನ ಸಂಸ್ಥಾ ಹಂದರ ಅಗತ್ಯ ?
4 ವಾಣಿಜ್ಯಕ ಬ್ಯಾಂಕುಗಳಿಗೆ ಗ್ರಾಮೀಣ ಅಭಿವೃದ್ಧಿ ಎಷ್ಟು ಸಂಗತ ಮತ್ತು ಗ್ರಾಮೀಣ ಅಭಿವೃದ್ಧಿಯನ್ನು ಪ್ರವರ್ತಿಸುವಲ್ಲಿ ಅವುಗಳ ಪಾತ್ರ ಏನಿರಬೇಕು ?
5 ಬೇರೆ ಬೇರೆ ದೇಶಗಳಲ್ಲಿ ಗ್ರಾಮೀಣ ಅಭಿವೃದ್ಧಿಯ ಬಗ್ಗೆ ವಾಣಿಜ್ಯ ಬ್ಯಾಂಕುಗಳ ಅನುಭವ ಎಂಥದು ?

## ಪ್ರಕರಣಾಧ್ಯಯನಗಳು

ಪ್ರಕರಣಾಧ್ಯಯನಕ್ಕೆ ಮೂರು ಪ್ರಕರಣಗಳನ್ನು ಆರಿಸಿಕೊಳ್ಳಲಾಗಿತ್ತು. ಮೊದಲನೆಯದು ಕಂಪನಿವಲಯದ ಬದಲಾಗುತ್ತಿರುವ ಬ್ಯಾಂಕಿಂಗ್ ಅಗತ್ಯತೆಗೆ ಸಂಬಂಧಿಸಿದ್ದರೆ ಎರಡನೆಯದು ವಾಣಿಜ್ಯ ಬ್ಯಾಂಕುಗಳ ಬದಲಾಗುತ್ತಿರುವ ಪಾತ್ರಕ್ಕೂ ಮೂರನೆಯದು ಅಂತರರಾಷ್ಟ್ರೀಯ ಸಾಲ ವಹಿವಾಟುಗಳ ನಷ್ಟಸಂಭಾವ್ಯತೆಯ ನಿರ್ಧರಿಸುವಿಕೆಗೂ ಸಂಬಂಧಿಸಿತ್ತು.

ಮೊದಲನೆಯ ಪ್ರಕರಣದಲ್ಲಿ ನಿಗಮವಲಯದ ಗ್ರಾಹಕನೊಬ್ಬ ಮುಂದಿನ ಐದು ವರುಷಗಳ ದುಡಿಯುವ ಬಂಡವಾಳದ ಅಗತ್ಯಗಳನ್ನು ಸೂಚಿಸಿ ಮಂಜೂರಾತಿ ಬೇಡುತ್ತಾನೆ.

ಎರಡನೆಯ ಪ್ರಕರಣದಲ್ಲಿ ಬ್ಯಾಂಕ್ ವ್ಯವಸ್ಥಾಪಕವರ್ಗವೊಂದು ತನ್ನ ಕಾರ್ಯವ್ಯಾಪ್ತಿಯನ್ನು ಹೆಚ್ಚಿಸಲು ತಾನೇ ನೇಮಿಸಿದ ಸಲಹಾ ಸಮಿತಿಯ ಶಿಫಾರಸನ್ನು ಜಾರಿಗೆ ತರದೆ ಸಾಂಪ್ರದಾಯಿಕ ಬ್ಯಾಂಕಿಂಗ್‌ಗೇ ಶರಣಾಗುತ್ತದೆ.

ಮೂರನೆಯ ಪ್ರಕರಣದಲ್ಲಿ ಅಭಿವೃದ್ಧಿಶೀಲ ದೇಶದ ವಾಣಿಜ್ಯ ಬ್ಯಾಂಕೊಂದು ತನ್ನ ಕಂಪನಿವಲಯದ ಗ್ರಾಹಕನಿಗೆ ಅಂತರರಾಷ್ಟ್ರೀಯ ಹಣ ಮಾರುಕಟ್ಟೆಯಿಂದ ವಿದೇಶಿ ಚಲಾರ್ಥ ಸಾಲ ಕೊಡಿಸಲು ತೆಗೆದುಕೊಳ್ಳುವ ಮುನ್ನೆಚ್ಚರಿಕೆ ಕ್ರಮಗಳ ಬಗ್ಗೆ ವಿವರಣೆ ಬಯಸಿತ್ತು.

41ನೆಯ ಬ್ಯಾಂಕಿಂಗ್ ಬೇಸಗೆ ಶಾಲೆಯಲ್ಲಿ ಮಂಡಿಸಲ್ಪಟ್ಟ ಎಲ್ಲಾ ಪ್ರಬಂಧಗಳನ್ನು, ಗುಂಪು ಚರ್ಚೆಯ ಪಠ್ಯಕ್ರಮಗಳನ್ನು, ಪ್ರಕರಣಾಧ್ಯಯನಗಳನ್ನು "Banking and Economic Development" ಎಂಬ ಹೆಸರಿನಲ್ಲಿ ಪುಸ್ತಕರೂಪದಲ್ಲಿ ಹೊರತಂದಿದೆ. ಬೇಸಗೆ ಶಾಲೆಯ ನಿರ್ದೇಶಕರ ಮುನ್ನುಡಿಯನ್ನು, ಪ್ರಬಂಧಕಾರರ ಭಾವಚಿತ್ರ ಹಾಗೂ ಕಿರುಪರಿಚಯಗಳನ್ನು ಪುಸ್ತಕ ಒಳಗೊಂಡಿದೆ.

## ಉಪಸಂಹಾರ

ಅಂತರರಾಷ್ಟ್ರೀಯ ಬ್ಯಾಂಕಿಂಗ್ ಶಾಲೆಯಿಂದ, ಸಾಮಾನ್ಯ ಬ್ಯಾಂಕರರಿಗೆ, ಬ್ಯಾಂಕಿಂಗ್ ವಿದ್ಯಾರ್ಥಿಗಳಿಗೆ, ಬ್ಯಾಂಕ್ ಗ್ರಾಹಕರಿಗೆ, ಏನು ಉಪಯೋಗವಿದೆ? ಎಂಬ ಪ್ರಶ್ನೆಗೆ ಬಹುಶಃ ನಕಾರಾತ್ಮಕ ಉತ್ತರ ದೊರಕೀತು. ಜಗತ್ತಿನ ಇಂದಿನ ಬ್ಯಾಂಕಿಂಗ್ ಪ್ರವೃತ್ತಿಗಳ ಬಗ್ಗೆ ಭಾಗಿಗಳಿಗೆ ಈ ಶಾಲೆ ಹೆಚ್ಚಿನ ಅರಿವು ಮೂಡಿಸುವುದರಲ್ಲಿ ಅನುಮಾನವೇನೂ ಇಲ್ಲ. ಶಾಲೆಯ ನಡಾವಳಿಗಳನ್ನು ಪುಸ್ತಕರೂಪದಲ್ಲಿ ತರುವುದರಿಂದ ಬ್ಯಾಂಕಿಂಗ್ ವಿದ್ಯಾರ್ಥಿಗಳಿಗೆ, ತಜ್ಞರಿಗೆ ಈ ಗ್ರಂಥಗಳು ಮಹತ್ತರ ಆಕರ ಗ್ರಂಥಗಳು ಆಗಬಲ್ಲವು. ಬಹುಶಃ ಈ ಪುಸ್ತಕಗಳು ತಮ್ಮ ಹೆಚ್ಚಿನ ಬೆಲೆಯಿಂದಾಗಿ ಸಾಮಾನ್ಯ ಬ್ಯಾಂಕರರನ್ನು ತಲುಪಲಾರವೇನೋ. ಬ್ಯಾಂಕಿಂಗ್ ಹಾಗೂ ಅರ್ಥಶಾಸ್ತ್ರದ ಪತ್ರಿಕೆಗಳು ಇವುಗಳಿಂದ ಆಯ್ದ ಲೇಖನಗಳನ್ನು ಪ್ರಕಟಿಸುವುದರ ಮೂಲಕ ಇದರ ಫಲ ಸಾಮಾನ್ಯ ಬ್ಯಾಂಕರರಿಗೂ ತಲುಪುವಂತೆ ಮಾಡಬಲ್ಲವು.

ಭಾರತದ ಬ್ಯಾಂಕರುಗಳ ಸಂಸ್ಥೆ ಪ್ರತಿವರ್ಷವೂ ರಾಷ್ಟ್ರೀಯ ಬ್ಯಾಂಕಿಂಗ್ ಶಾಲೆಯೊಂದನ್ನು ಸಂಘಟಿಸುವುದರ ಜೊತೆಗೆ ಇತರ ಬೇಸಗೆ ಶಾಲೆಗಳ ನಡಾವಳಿಗಳ ಪುಸ್ತಕಗಳ ಅಗ್ಗದ ಆವೃತ್ತಿಯನ್ನು ತರಬಹುದು.

ಪರಿಶಿಷ್ಟ I

### ಇದುವರೆಗೆ ನಡೆದ ಬ್ಯಾಂಕಿಂಗ್ ಶಾಲೆಗಳ ವಿವರ

| ವರ್ಷ | ಸ್ಥಳ | ಪ್ರಮುಖ ವಿಚಾರ |
|---|---|---|
| 1948 | ಇಂಗ್ಲೆಂಡ್ | ಪ್ರಸ್ತುತ ಹಣಕಾಸು ಸಮಸ್ಯೆಗಳು ಮತ್ತು ಲಂಡನ್ ನಗರ |
| 1949 | ಇಂಗ್ಲೆಂಡ್ | ವಿದೇಶಿ ವ್ಯಾಪಾರದ ವಿನ್ಯಾಸ ಹಾಗೂ ಹಣಕಾಸು ನೀಡಿಕೆ |
| 1950 | ಸ್ವೀಡನ್ | ಆರ್ಥಿಕ ಸ್ಥಿತಿಗಳು ಮತ್ತು ಬ್ಯಾಂಕಿಂಗ್ ಸಮಸ್ಯೆಗಳು |
| 1951 | ಫ್ರಾನ್ಸ್ | ವಿನಿಯೋಜನೆಗಳಿಗೆ ಹಣಕಾಸು ನೀಡಿಕೆ |
| 1952 | ಇಂಗ್ಲೆಂಡ್ | ಬ್ಯಾಂಕಿಂಗ್ ಮತ್ತು ವಿದೇಶಿ ವ್ಯಾಪಾರ |
| 1953 | ಬೆಲ್ಜಿಯಂ | ಅರ್ಥವ್ಯವಸ್ಥೆಯಲ್ಲಿ ಬ್ಯಾಂಕಿಂಗ್ ಪಾತ್ರದ ಬಗ್ಗೆ ಇತ್ತೀಚಿನ ಬೆಳವಣಿಗೆ |
| 1954 | ಸ್ಪೇನ್ | ಬ್ಯಾಂಕುಗಳ ಯುದ್ಧಾನಂತರದ ಕಾರ್ಯನಿರ್ವಹಣೆ : ಮಾಮೂಲಿಗೆ ಹಿಂದಿರುಗುವುವೆ ? |
| 1955 | ಇಂಗ್ಲೆಂಡ್ | ಅಂತರರಾಷ್ಟ್ರೀಯ ಬ್ಯಾಂಕಿಂಗ್ ಮತ್ತು ವಿದೇಶಿ ವ್ಯಾಪಾರ |

| | | |
|---|---|---|
| 1956 | ಯು ಎಸ್ ಎ | ಅಂತರರಾಷ್ಟ್ರೀಯ ಬ್ಯಾಂಕಿಂಗ್ ಮತ್ತು ವಿದೇಶಿ ವ್ಯಾಪಾರ |
| 1957 | ಜರ್ಮನಿ | ಕೇಂದ್ರ ಬ್ಯಾಂಕ್ ಹಾಗೂ ವಾಣಿಜ್ಯ ಬ್ಯಾಂಕುಗಳ ನಡುವಣ ಸಂಬಂಧ |
| 1958 | ಸ್ಕಾಟ್ಲೆಂಡ್ | ಭವಿಷ್ಯದಲ್ಲಿ ಬ್ಯಾಂಕಿಂಗ್‌ನ ಸಂಘಟನೆ |
| 1959 | ಸ್ವಿಟ್ಜರ್‌ಲೆಂಡ್ | ತಾಂತ್ರಿಕ ಪ್ರಗತಿಗೆ ಹಣಕಾಸು ನೀಡಿಕೆ |
| 1960 | ನೆದರ್‌ಲೆಂಡ್ | ಬ್ಯಾಂಕ್ ಉದರಿ ಹಾಗೂ ಹಣಕಾಸು ನೀಡಿಕೆಯ ಪ್ರವೃತ್ತಿಗಳು |
| 1961 | ಇಂಗ್ಲೆಂಡ್ | ಅಂತರರಾಷ್ಟ್ರೀಯ ವ್ಯಾಪಾರ ಮತ್ತು ಹಣಕಾಸು ಕೇಂದ್ರವಾಗಿ ಲಂಡನ್ ನಗರ |
| 1962 | ಯು ಎಸ್ ಎಸ್ ಆರ್ | ಯು ಎಸ್ ಎಸ್ ಆರ್‌ನಲ್ಲಿ ಬ್ಯಾಂಕಿಂಗ್ |
| 1963 | ಆಸ್ಟ್ರಿಯ | ಮಧ್ಯಮಾವಧಿ ಹಾಗೂ ದೀರ್ಘಕಾಲೀನ ಉದರಿ ನೀಡುವ ಸಂಬಂಧದಲ್ಲಿ ವಾಣಿಜ್ಯಕ ಬ್ಯಾಂಕುಗಳು |
| 1964 | ಇಂಗ್ಲೆಂಡ್ | ಯುರೋಪ್‌ನ ಇಂದಿನ ಬ್ಯಾಂಕಿಂಗ್ ಪ್ರವೃತ್ತಿಗಳು |
| 1965 | ಆಸ್ಟ್ರೇಲಿಯಾ | ಶೀಘ್ರ ಅಭಿವೃದ್ಧಿ ಹೊಂದುತ್ತಿರುವ ಅರ್ಥ ವ್ಯವಸ್ಥೆಯಲ್ಲಿ ಬ್ಯಾಂಕುಗಳ ಪಾತ್ರ |
| 1966 | ನಾರ್ವೆ | ಹಣಕಾಸು ಮತ್ತು ಉದರಿ ಧೋರಣೆ ಮತ್ತು ಬ್ಯಾಂಕಿಂಗ್ ಸಮುದಾಯ |
| 1967 | ಕೆನಡಾ | ಆಧುನಿಕ ಬ್ಯಾಂಕಿಂಗ್‌ನ ಸವಾಲುಗಳು ಮತ್ತು ಪ್ರವೃತ್ತಿಗಳು |
| 1968 | ಐರ್ಲೆಂಡ್ | ಆರ್ಥಿಕ ಯೋಜನೆ ಮತ್ತು ಬ್ಯಾಂಕಿಂಗ್ ವ್ಯವಸ್ಥೆ |
| 1969 | ಡೆನ್ಮಾರ್ಕ್ | ಬ್ಯಾಂಕಿಂಗ್ ಮತ್ತು ಆರ್ಥಿಕ ವಿಸ್ತರಣೆಯ ಸಮಸ್ಯೆಗಳು |
| 1970 | ಇಂಗ್ಲೆಂಡ್ | 1970ರ ದಶಕದಲ್ಲಿ ಬ್ಯಾಂಕಿಂಗ್ |
| 1971 | ಇಟಲಿ | ಬದಲಾಗುತ್ತಿರುವ ವಿಶ್ವದಲ್ಲಿ ಬ್ಯಾಂಕಿಂಗ್ |
| 1972 | ಯು.ಎಸ್.ಎ. | ವಿಶ್ವ ಬ್ಯಾಂಕಿಂಗ್ ಸವಾಲು |
| 1973 | ಇಂಗ್ಲೆಂಡ್ | ಬ್ಯಾಂಕಿಂಗ್ ವ್ಯವಹಾರ |
| 1974 | ಫಿನ್‌ಲೆಂಡ್ | ಅಂತರ್ಗತ ಜಗತ್ತಿನಲ್ಲಿ ಬ್ಯಾಂಕಿಂಗ್ |
| 1975 | ಫ್ರಾನ್ಸ್ | ಇಂದು ಜಗತ್ತಿನಲ್ಲಿ ಬ್ಯಾಂಕಿಂಗ್‌ಗೆ ಹೊಸ ಸವಾಲುಗಳು |
| 1976 | ಆಸ್ಟ್ರೇಲಿಯಾ | ಬದಲಾಗುತ್ತಿರುವ ಪರಿಸರದಲ್ಲಿ ಬ್ಯಾಂಕಿಂಗ್ |
| 1977 | ಸ್ವೀಡನ್ | ಜಾಗತಿಕ ಬಂಡವಾಳ ಸಂಪನ್ಮೂಲಗಳ ಪರಿಣಾಮಕಾರಿ ಉಪಯೋಗ |
| 1978 | ಬೆಲ್ಜಿಯಂ | ಹೊಸ ಸಮಾಜದಲ್ಲಿ ಬ್ಯಾಂಕಿಂಗ್ |
| 1979 | ಇಂಗ್ಲೆಂಡ್ | ದೀರ್ಘಕಾಲೀನ ಅಭಿವೃದ್ಧಿಗಳ ಹಣಕಾಸು ನೀಡಿಕೆ |
| 1980 | ಕೆನಡಾ | ಬ್ಯಾಂಕಿಂಗ್‌ನಲ್ಲಿ ಹೊಸ ದಶಕ |
| 1981 | ಪಶ್ಚಿಮ ಜರ್ಮನಿ | ಅಂತರರಾಷ್ಟ್ರೀಯ ಬ್ಯಾಂಕಿಂಗ್ : ಹೊಸ ಆಯಾಮಗಳು |
| 1982 | ಸ್ಕಾಟ್‌ಲೆಂಡ್ | ಬ್ಯಾಂಕಿಂಗ್‌ನ ವೈವಿಧ್ಯೀಕರಣ |
| 1983 | ಯು ಎಸ್ ಎ | ಪರಸ್ಪರಾವಲಂಬಿ ಜಗತ್ತಿನ ತಂತ್ರವ್ಯೂಹಾತ್ಮಕ ವಿಚಾರಗಳು |
| 1984 | ನೆದರ್‌ಲೆಂಡ್ | ಅಂತರರಾಷ್ಟ್ರೀಯ ಹಣಕಾಸು ನೀಡಿಕೆಯಲ್ಲಿ ಬ್ಯಾಂಕುಗಳ ಪಾತ್ರ |
| 1985 | ಇಂಗ್ಲೆಂಡ್ | ಜಾಗತಿಕ ಬ್ಯಾಂಕಿಂಗ್‌ನಲ್ಲಿ ಸ್ಪರ್ಧೆ ಮತ್ತು ಸಹಕಾರ |
| 1986 | ಆಸ್ಟ್ರೇಲಿಯಾ | ವಿನಿಯಮನರಹಿತ ಪರಿಸರದಲ್ಲಿ ಬ್ಯಾಂಕಿಂಗ್ |
| 1987 | ಸ್ವಿಟ್ಜರ್‌ಲೆಂಡ್ | ಅಂತರರಾಷ್ಟ್ರೀಯ ಹಣಕಾಸು ಕೇಂದ್ರಗಳು, ಸಂಘಟನೆ, ಸಾಧನೆ ಮತ್ತು ಭವಿಷ್ಯ |

# ಸಂಪನ್ಮೂಲಗಳ ಸಂಗ್ರಹಣೆ ಮತ್ತು ವಿವಿಧೀಕರಣ

**ರಾಷ್ಟ್ರೀಕರಣದ ಅನಂತರ ಭಾರತೀಯ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಆಗಿರುವ ಬೆಳವಣಿಗೆಯ ಪರಿಚಯ, ವಿಶ್ಲೇಷಣೆ. ಭಾರತೀಯ ಸ್ಟೇಟ್ ಬ್ಯಾಂಕಿನ ನಿವೃತ್ತ ಉನ್ನತಾಧಿಕಾರಿಯೊಬ್ಬರ ಸಮೃದ್ಧ ಅನುಭವ. ಬ್ಯಾಂಕ್ ರಾಷ್ಟ್ರೀಕರಣದ ದಶಮಾನೋತ್ಸವದ ಅಂಗವಾಗಿ ಭಾರತೀಯ ಸ್ಟೇಟ್ ಬ್ಯಾಂಕ್ ಮತ್ತು ರಾಜ್ಯದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಏರ್ಪಡಿಸಿದ್ದ ವಿಚಾರ ಸಂಕಿರಣದಲ್ಲಿ ಮಂಡಿಸಲಾದ ಒಂದು ಪ್ರಬಂಧ.**

**ಗೋವಿಂದಮೂರ್ತಿ ದೇಸಾಯಿ**
ಅಧಿಕಾರಿ (ನಿವೃತ್ತ), ಭಾರತೀಯ ಸ್ಟೇಟ್ ಬ್ಯಾಂಕ್

ಸಾರ್ವಜನಿಕ ಕ್ಷೇತ್ರದಲ್ಲಿರುವ ಬ್ಯಾಂಕುಗಳು ಈಗ ಪ್ರಬುದ್ಧಾವಸ್ಥೆಯನ್ನು ತಲುಪಿವೆ. ಇಂದು ಅವು ತಮ್ಮ ಎರಡು ದಶಕಗಳ ಸಾರ್ಥಕ ಕಾರ್ಯಾಚರಣೆಯನ್ನು ನಡೆಸಿ, ಮುಂಬರುವ ವರುಷಗಳಲ್ಲಿ, ಪರಿವರ್ತನಾವಸ್ಥೆಯಲ್ಲಿ ನಿಂತಿರುವ ಸಮಾಜವು ಒಡ್ಡಬಹುದಾದ ಸವಾಲುಗಳಿಗೆ ಮತ್ತು ಸಾಗರದಾಚೆ ವೈವಿಧ್ಯಮಯವಾಗಿಯೂ ಹೆಚ್ಚು ಹೆಚ್ಚು ತಾಂತ್ರಿಕವಾಗಿಯೂ ಬೆಳೆಯುತ್ತ ನಡೆದ ಬ್ಯಾಂಕಿಂಗ್ ವ್ಯವಸ್ಥೆ ಬೀರಬಹುದಾದ ಪರಿಣಾಮಗಳಿಗೆ ಸ್ಪಂದಿಸಲು ತಾವು ಯಾವ ಹೊಸ ಆಯಾಮಗಳನ್ನು ಕಲ್ಪಿಸಿಕೊಳ್ಳಬೇಕೆಂಬ ಚಿಂತನೆಯ ಹಂತದಲ್ಲಿ ನಿಂತಿವೆ.

ಭಾರತೀಯ ವಾಣಿಜ್ಯ ಬ್ಯಾಂಕುಗಳು ಊಹೆಗೆ ಮೀರಿ ಬೆಳೆದು ನಿಂತಿವೆ. 1969ರ ಜುಲೈ 19ರಂದು ಹದಿನಾಲ್ಕು ಬ್ಯಾಂಕುಗಳು ರಾಷ್ಟ್ರೀಕರಣಗೊಂಡಾಗ ಮುಂದಿನ ಎರಡು ದಶಕಗಳಲ್ಲಿ ಅವು ತಮ್ಮ ಸಂಪನ್ಮೂಲಗಳನ್ನು ಬೃಹದಾಕಾರದಲ್ಲಿ ಕ್ರೋಢೀಕರಿಸಿಕೊಂಡು, ಶ್ರೀಸಾಮಾನ್ಯರ ಬಾಗಿಲಿಗೆ ಹೋಗಿ ಸಾಲ ವಿತರಿಸುವ ಮತ್ತು ಅವರ ಕುಂದುಕೊರತೆಗಳನ್ನು ಕೇಳುವ ಸ್ಥಿತಿಯನ್ನು ತಲುಪಬಹುದೆಂದು ಯಾವ ಅರ್ಥಶಾಸ್ತ್ರಿಯೂ ಅಂದು ಭಾವಿಸಿರಲಿಲ್ಲ. ಅಷ್ಟೇಕೆ, ರಾಷ್ಟ್ರೀಕರಣವನ್ನು ವಿರೋಧಿಸಿ ನ್ಯಾಯಾಲಯದ ಕಟ್ಟೆಯನ್ನು ಹತ್ತಿ, ಬ್ಯಾಂಕುಗಳ ಅಭಿವೃದ್ಧಿಯ ಬಗ್ಗೆ ಸಾಶಂಕರಾದವರೇ ಹೆಚ್ಚಿದ್ದರು. ಇಂದು ಕೂಡ, ಬ್ಯಾಂಕುಗಳ ಈ ಕ್ಷಿಪ್ರ ಬೆಳವಣಿಗೆ ವಿಸ್ಫೋಟಕ ಹಂತವನ್ನು ತಲುಪಿದ್ದು, ನಮ್ಮನ್ನು ಸ್ವಪ್ನಲೋಕದತ್ತ ಎಳೆದೊಯ್ಯುಹತ್ತಿದೆಯೆಂದು ಹೇಳುವ ಆರ್ಥಿಕ ತಜ್ಞರು ಇದ್ದಾರೆ. ಅದೇನಿದ್ದರೂ ಬ್ಯಾಂಕುಗಳು ಈಗ ಆತ್ಮಪರೀಕ್ಷೆಯನ್ನು ಮಾಡಿಕೊಂಡು ಸಾಮಾಜಿಕ ಒತ್ತಡಗಳಿಂದ ಸರಕಾರವು ಹೇರಬಹುದಾದ ಹೊಸ ಹೊಸ ಸಾಮಾಜಿಕಾರ್ಥಿಕ ಜವಾಬ್ದಾರಿಗಳನ್ನು ಹೊತ್ತು, ಪರಿಣಾಮಕಾರಿಯಾಗಿ ನಿರ್ವಹಿಸುವಷ್ಟು ತಮ್ಮ ಅಂಗರಚನೆ ಮತ್ತು ಸಮರ್ಥ ಸಿಬ್ಬಂದಿಯನ್ನು ಬೆಳೆಸಿಕೊಂಡಿವೆಯೇ ? ಇಲ್ಲದಿದ್ದರೆ ಅದಕ್ಕೆ ಯಾವ ಹೊಸ ವ್ಯವಸ್ಥೆಯನ್ನು ಮಾಡಿಕೊಳ್ಳಬೇಕೆಂಬ ಬಗ್ಗೆ ಗಂಭೀರವಾಗಿ ಯೋಚಿಸಬೇಕಾಗಿದೆ. ಸರ್ಕಾರವು ದಾರಿದ್ರ್ಯ ನಿರ್ಮೂಲನೆಗೆ ಕಟಿಬದ್ಧವಾಗಿದ್ದರಿಂದ, ತನ್ನ ಹಲವಾರು ಯೋಜನೆಗಳ ಅನುಷ್ಠಾನಕ್ಕೆ ಬ್ಯಾಂಕುಗಳನ್ನು ಹೆಚ್ಚು ಹೆಚ್ಚು ಬಳಸಿಕೊಳ್ಳುವ ಸಾಧ್ಯತೆಗಳು ಸ್ಫುಟವಾಗಿವೆ.

## ಸಂಪನ್ಮೂಲಗಳ ಸಂಗ್ರಹಣೆ

ಈ ಎರಡು ದಶಕಗಳಲ್ಲಿ ಸಾರ್ವಜನಿಕ ಕ್ಷೇತ್ರೀಯ ಬ್ಯಾಂಕುಗಳು ಸಂಪನ್ಮೂಲಗಳನ್ನು ಅಭಿವೃದ್ಧಿಪಡಿಸಿಕೊಳ್ಳುವಲ್ಲಿ ಮತ್ತು ಅವುಗಳನ್ನು ಬಳಸಿಕೊಳ್ಳುವಲ್ಲಿ ಅಪ್ರತಿಮ ಸಾಧನೆಯನ್ನು ತೋರಿಸಿವೆ. ಈ ದೇಶಕ್ಕೆ ಬ್ಯಾಂಕಿಂಗ್ ವ್ಯವಸ್ಥೆ ಕಾಲಿಟ್ಟಿತೆಂದು ಹೇಳುವ 1770ನೆಯ (ಕಲಕತ್ತೆಯಲ್ಲಿ ಬ್ಯಾಂಕ್ ಆಫ್ ಹಿಂದೂಸ್ಥಾನ ಸ್ಥಾಪಿಸಲ್ಪಟ್ಟಿದ್ದು) ಇಸವಿಯಿಂದ 1969ರ ಜೂನ್ 15ರ ವರೆಗೆ ಸಂಗ್ರಹಿಸಿದ ಠೇವಣಿಗಳನ್ನು ಮತ್ತು ಈ ದಶಕದ ಎಂಟು ವರ್ಷಗಳಲ್ಲಿ ಕ್ರೋಢೀಕರಿಸಿದ ಠೇವಣಿಗಳನ್ನು ತೂಗಿ ನೋಡಿದರೆ, ಅನುತ್ತಮ ಬೆಳವಣಿಗೆ ಕಂಡು ಬರುತ್ತದೆ.

1969ರ ಜೂನ್ ಅಂತ್ಯದಲ್ಲಿ ಶೆಡ್ಯೂಲ್ಡ್ ಮತ್ತು ವಾಣಿಜ್ಯ ಬ್ಯಾಂಕುಗಳಲ್ಲಿ ಇದ್ದ ಠೇವಣಿ ರೂ. 4,227 ಕೋಟಿ. 1988 ಡಿಸೆಂಬರ್ ಅಂತ್ಯದಲ್ಲಿ ಅವು ರೂ. 1,41,822 ಕೋಟಿ ಸಂಗ್ರಹಿಸಿ ಹಿಂದಿನ ಎಲ್ಲಾ ಸಂಪನ್ಮೂಲ ಸಂಗ್ರಹಣೆಯ ದಾಖಲೆಗಳನ್ನು ಅಳುಕಿಸಿ ಹಾಕಿದವು. ಈ ಬೆಳವಣಿಗೆ 33.4ರಷ್ಟು ಬಾಹುಲ್ಯವನ್ನು ತೋರಿಸಿದೆ. 1969ರ ಜೂನ್ ಅಂತ್ಯಕ್ಕೆ ಗ್ರಾಮೀಣ ಪ್ರದೇಶದಲ್ಲಿ ಸಂಚಿತವಾದ ಸಂಪನ್ಮೂಲಗಳು ಕೇವಲ ರೂ. 145 ಕೋಟಿ ಇದ್ದವು. 1988ರ ಡಿಸೆಂಬರ್ ಅಂತ್ಯಕ್ಕೆ ಈ ಠೇವುಗಳು ರೂ. 20,907 ಕೋಟಿ ತಲುಪಿ ಪ್ರತಿಶತ 14,418ರಷ್ಟು ಅಭಿವೃದ್ಧಿಯನ್ನು ದಾಖಲಿಸಿದವು. ಈ ಹೆಚ್ಚಳದಲ್ಲಿ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಪಾತ್ರವೂ ಹಿರಿದಾಗಿದೆ. 1985 ಜೂನ್ ಅಂತ್ಯದಲ್ಲಿ ಒಟ್ಟು ರೂ. 60,533 ಕೋಟಿ ಠೇವಣಿಗಳಿದ್ದವು. ಅವು 1988ರ ಡಿಸೆಂಬರ್ ಅಂತ್ಯಕ್ಕೆ ರೂ. 1,41,822 ಕೋಟಿ ಎತ್ತರಕ್ಕೆ ಹೋಗಿ ಕೇವಲ ಎರಡೂವರೆ ವರ್ಷಗಳಲ್ಲಿ ರೂ. 81,289 ಕೋಟಿ ನಿವ್ವಳ ಠೇವುಗಳನ್ನು ಸಂಗ್ರಹಿಸಿದವು. ಈ ಅಭಿವೃದ್ಧಿ, 1.30 ಪಟ್ಟು ಅಥವಾ ಪ್ರತಿಶತ 234ರಷ್ಟು ಹೆಚ್ಚಳವನ್ನು ತೋರಿಸಿದಂತಾಯಿತು. ಇದು ಸಾಮಾನ್ಯ ಸಾಧನೆಯಲ್ಲ. ಪಂಚವಾರ್ಷಿಕ ಯೋಜನೆಯ ವೆಚ್ಚ, ಬೆಳೆಯುತ್ತಿರುವ ಹಣದುಬ್ಬರ, ಅನಿವಾಸಿ ಭಾರತೀಯರ ಉಳಿಕೆ, ಈ ಹೆಚ್ಚಳಕ್ಕೆ ಬಹುಮಟ್ಟಿಗೆ ಕಾರಣವಾದರೂ ರಾಷ್ಟ್ರೀಕರಣದ ಅನಂತರ ಪ್ರತಿಯೊಂದು ಶಾಖೆಯೂ ಇಂತಿಷ್ಟು ಠೇವಣಿಗಳನ್ನು ಸಂಗ್ರಹಿಸಬೇಕೆಂಬ ಗುರಿಯನ್ನು ಮುಖ್ಯ ಕಛೇರಿಗಳು ಪರಸ್ಪರ ವಿಚಾರ ವಿನಿಮಯದಿಂದ ನಿರ್ಧರಿಸುವ ಬ್ಯಾಂಕಿನ ಚುರುಕು ಕಾರ್ಯವಿಧಾನವೂ ಕಾರಣವಾಗಿದೆ. ಇತ್ತೀಚಿನ ವರ್ಷಗಳಲ್ಲಿ ಬ್ಯಾಂಕ್ ಠೇವಣಿಗಳು ಪ್ರತಿಶತ 29ರಷ್ಟು ವೃದ್ಧಿಯಾಗುತ್ತ ನಡೆದಿದೆ. ಸರಕಾರ ಸಂಗ್ರಹಿಸುತ್ತಿರುವ ಸಣ್ಣ ಉಳಿತಾಯದ ಮೇಲೆ ಸಾರ್ವಜನಿಕ ಉದ್ದಿಮೆಗಳು, ನಿಗಮುಗಳು, ಖಾಸಗಿ ಕಂಪನಿಗಳು ಸ್ವೀಕರಿಸುವ ಠೇವುಗಳ ಮೇಲೆ ಪ್ರತಿಶತ ಎರಡರಿಂದ ನಾಲ್ಕು ರೂಪಾಯಿ ಹೆಚ್ಚಿನ ಬಡ್ಡಿ ದೊರೆತರೂ ಬ್ಯಾಂಕುಗಳ ಠೇವಣಿಗಳು ತೃಪ್ತಿಕರವಾಗಿ ಬೆಳೆಯಹತ್ತಿವೆ. ಈ ಬೆಳವಣಿಗೆಗೆ ಬ್ಯಾಂಕುಗಳ ಭೌಗೋಲಿಕ ವಿಸ್ತರಣೆಯೂ ಒಂದು ಮುಖ್ಯ ಕಾರಣವಾಗಿವೆ. ಇದು ಖಂಡಿತ ರಾಷ್ಟ್ರೀಕರಣದ ಫಲ.

ಈ ಸಂಪನ್ಮೂಲ ಸಂಗ್ರಹಣೆಯಲ್ಲಿ ಎಂದಿನಂತೆ ನಗರಪ್ರದೇಶ ಬ್ಯಾಂಕುಗಳ ಪಾಲು ದೊಡ್ಡದು. ನಗರ ಪ್ರದೇಶಗಳಿಂದ ಬ್ಯಾಂಕುಗಳ ಮೂಲಕ ಹರಿದುಬಂದ ಠೇವುಗಳು ರಾಷ್ಟ್ರೀಕರಣದ ಪೂರ್ವದಲ್ಲಿ ರೂ. 1,024 ಕೋಟಿ ಇದ್ದರೆ, 1988

ಡಿಸೆಂಬರ್ ಅಂತ್ಯಕ್ಕೆ ರೂ. 90,802 ಕೋಟಿ ಹಂತಕ್ಕೆ ತಲುಪಿದವು. ಈ ವೃದ್ಧಿ ಪ್ರತಿಶತ 1054ರಷ್ಟಾಯಿತು. ಸಂಪನ್ಮೂಲಗಳೇನೋ ಸಮೃದ್ಧವಾಗಿ ಬೆಳೆದಿವೆ. ಆದರೆ ಅವುಗಳ ವಿನಿಯೋಜನೆ ಸುಭದ್ರ ಮತ್ತು ಲಾಭಪ್ರದ ರೀತಿಯಲ್ಲಿ ನಡೆಯದಿದ್ದರೆ ಸಂಪನ್ಮೂಲಗಳನ್ನು ಕ್ರೋಢೀಕರಿಸಿಯೂ ಹಾನಿಯಾಗುವ ಸಂಭವ ಇರುತ್ತದೆ. ಸಂಚಿತ ಸಂಪನ್ಮೂಲಗಳಿಗೂ ಅವುಗಳನ್ನು ವಿನಿಯೋಗಿಸುವ ಕ್ರಮಕ್ಕೂ ಸಮಂಜಸ ಮತ್ತು ಪರಿಣಾಮಕಾರಿ ಹೊಂದಾಣಿಕೆ ಕಂಡುಬರದಂತಾಗಿದೆ. ರಿಸರ್ವ್ ಬ್ಯಾಂಕ್ ವಿಧಿಸಿದ ನಗದು ಮೀಸಲು (ಸಿ.ಆರ್.ಆರ್) ಮತ್ತು ಪರಿನಿಯತ ದ್ರವತ್ವ ಅನುಪಾತಗಳನ್ನು (ಎಸ್.ಎಲ್.ಆರ್.) ಕಾಯ್ದುಕೊಂಡು ಹೋಗುವುದು ಕೆಲ ಬ್ಯಾಂಕುಗಳಿಗೆ ತುಂಬಾ ಕಷ್ಟಕರವಾಗಿದೆ. ಹೀಗಾಗಿ ಅವು ಅನಾವಶ್ಯಕವಾಗಿ ದಂಡವನ್ನು ತೆರಬೇಕಾಗಿದೆ. ಅಲ್ಲಲ್ಲಿ ಚದುರಿದ ಶಾಖೆಗಳಲ್ಲಿದ್ದ ಸಂಪನ್ಮೂಲಗಳನ್ನು ಒಂದೆಡೆ ಕೇಂದ್ರೀಕರಿಸಿ, ಲಾಭಪ್ರದ ರೀತಿಯಲ್ಲಿ ಅವುಗಳನ್ನು ವಿನಿಯೋಗಿಸುವ ಯಂತ್ರ ಕುಸಿದುಬಿದ್ದದ್ದೇ ರಿಸರ್ವ್ ಬ್ಯಾಂಕಿನ ನಿಯಮಗಳ ಉಲ್ಲಂಘನೆಗೆ ಕಾರಣವಾಗಿದೆ. ಇದಕ್ಕೆ ಪರಿಣಾಮಕಾರಿ ನಿಯಂತ್ರಣ ಮತ್ತು ಸಂಪರ್ಕ ಸಾಧನೆಗಳ ಕೊರತೆ ಮೂಲ ಕಾರಣ. ಪ್ರತಿಯೊಂದು ರಾಷ್ಟ್ರೀಕೃತ ಬ್ಯಾಂಕು ದೇಶದ ಮೂಲೆಮೂಲೆಗೂ ತನ್ನ ಶಾಖೆಗಳನ್ನು ಪಸರಿಸಬೇಕೆಂಬ ಹವ್ಯಾಸವನ್ನು ಬೆಳೆಸಿಕೊಂಡಿದ್ದೂ ಕಳೆದೆರಡು ದಶಕಗಳಲ್ಲಿ ಮುಂದೆ ಬರಬಹುದಾದ ತೊಂದರೆಗಳನ್ನು ಊಹಿಸದೆ ಅವೈಜ್ಞಾನಿಕ ರೀತಿಯಲ್ಲಿ ಶಾಖೆಗಳನ್ನು ತೆರೆಯಲು ರಿಸರ್ವ್ ಬ್ಯಾಂಕು ಅನುಮತಿಯನ್ನಿತ್ತಿದ್ದೂ ಈ ತೊಂದರೆಗೆ ಕಾರಣವಾಗಿದೆ. ರಾಷ್ಟ್ರೀಕರಣದ ಕಾಲದಲ್ಲಿ 1969 ಜೂನ್ 30ರಂದು 8,262 ಬ್ಯಾಂಕ್ ಶಾಖೆಗಳಿದ್ದವು. ಅವು 1988 ಡಿಸೆಂಬರ್ ಅಂತ್ಯಕ್ಕೆ ಬೆಳೆದು 56,282ರ ಸಂಖ್ಯೆಗೆ ಏರಿದವು. ಒಂದು ದೃಷ್ಟಿಯಲ್ಲಿ ಈ ಬ್ಯಾಂಕುಗಳು ಪಸರಿಸಿದ್ದು ದೇಶದ ಆರ್ಥಿಕ ಬೆಳವಣಿಗೆಗೆ ತುಂಬಾ ಸಹಾಯವಾಗಿದೆ. ಮೂರುನೂರು ವರುಷಗಳಲ್ಲಿ ಆಗದ ಈ ಕಾರ್ಯ ಕಳೆದ ಒಂದೂವರೆ ದಶಕಗಳಲ್ಲಿ ಆಗಿದೆ. 1984–85ರ ಒಂದೇ ಸಾಲಿನಲ್ಲಿ ತೆರೆಯಲ್ಪಟ್ಟ 6,222 ಹೊಸ ಶಾಖೆಗಳಲ್ಲಿ 4,900 ಶಾಖೆಗಳು ಬ್ಯಾಂಕ್ ಸೇವೆಯಿಂದ ವಂಚಿತವಾಗಿದ್ದ ಕೇಂದ್ರಗಳಲ್ಲಿ ತೆರೆಯಲ್ಪಟ್ಟಿದ್ದು ಒಂದು ಗಮನಾರ್ಹ ಸಾಧನೆ. ಈ ದಿಶೆಯಲ್ಲಿ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ (ಆರ್.ಆರ್.ಬಿ) ಬೆಳವಣಿಗೆ ಕೂಡ ಅತ್ಯಂತ ಮಹತ್ವದ್ದು. ಭೌಗೋಳಿಕವಾಗಿ ಬ್ಯಾಂಕುಗಳು ಪಸರಿಸುತ್ತ ನಡೆದಂತೆ ಗ್ರಾಮೀಣ ಭಾಗದ ಸಂಪನ್ಮೂಲಗಳನ್ನು ಸಂಗ್ರಹಿಸಲು ಸಾಧ್ಯವಾಗಿದೆ. ಒಟ್ಟು ದೇಶದಲ್ಲಿರುವ (ಡಿಸೆಂಬರ್ 1988) 56,282 ಶಾಖೆಗಳಲ್ಲಿ 31,641 ಶಾಖೆಗಳು ಅಂದರೆ ಪ್ರತಿ ಶತ 56.2ರಷ್ಟು ಶಾಖೆಗಳು ಗ್ರಾಮೀಣ ಪ್ರದೇಶದಲ್ಲಿವೆ. ಈ ಸಾಧನೆಯಿಂದಲೇ ಮನೆಯ ಬಾಗಿಲಿಗೆ ಬ್ಯಾಂಕು ಬಂದಿದೆ. ಆದರೆ ಈ ಬೆಳವಣಿಗೆಯ ಹಿಂದೆ ಒಂದು ಸೂತ್ರಬದ್ಧತೆ ಇಲ್ಲ. ಹಲವಾರು ಶಾಖೆಗಳು ತಮ್ಮ ನಿಯಂತ್ರಣ ಕೇಂದ್ರಗಳಿಂದ ತೀರ ದೂರವಿದ್ದುದರಿಂದ ಬೇರೆ ರಾಜ್ಯ, ಬೇರೆ ಪರಿಸರ, ಬೇರೆ ಭಾಷೆಗಳಲ್ಲಿ ವ್ಯವಹರಿಸಬೇಕಾಗಿರುವುದರಿಂದ ಹಲವಾರು ಮಾನವೀಯ ಮತ್ತು ಆಡಳಿತಾತ್ಮಕ ಅಡಚಣೆಗಳನ್ನು ಎದುರಿಸಬೇಕಾಗಿದೆ. ಅದರ ಬದಲು, ಆಯಾ ರಾಜ್ಯಗಳಲ್ಲಿ ಪ್ರಬಲವಾಗಿದ್ದ ಬ್ಯಾಂಕುಗಳಿಗೆ, ಅಲ್ಲಿ ಅಥವಾ ನೆರೆಯಲ್ಲಿ, ಪರಿಣಾಮಕಾರಿ ನಿಯಂತ್ರಣಕ್ಕೆ ಸಹಜವಾಗಿ ಒಳಪಡಲು ಸಾಧ್ಯವಾಗಿರುವಂತೆ ಶಾಖೆಗಳನ್ನು ತೆರೆಯಲು ಅನುಮತಿಯನ್ನೀಯುವ ಧೋರಣೆಯನ್ನು ರಿಸರ್ವ್ ಬ್ಯಾಂಕು ಮೊದಲಿನಿಂದಲೂ ಅನುಸರಿಸಿದ್ದರೆ ಈ ಗೋಜು ಪರಿಸ್ಥಿತಿ ಉದ್ಭವಿಸುತ್ತಿರಲಿಲ್ಲ. ಇದಕ್ಕೂ ಹೆಚ್ಚಿನದೆಂದರೆ ಬ್ಯಾಂಕು ಬ್ಯಾಂಕುಗಳ ಮಧ್ಯದ ಕತ್ತುಹಿಚುಕುವ ಸ್ಪರ್ಧೆ ನಿಂತುಹೋಗುತ್ತಿತ್ತು. ಒಂದೇ ಬ್ಯಾಂಕಿಗೆ ಅವುಗಳ ಶಕ್ತಿಮೀರಿ ಶಾಖೆಗಳನ್ನು ತೆರೆಯಲು ಆಸ್ಪದವಿತ್ತದ್ದಕ್ಕೆ ಅವುಗಳ ಅಂತರ ಶಾಖೆಯ ಲೆಕ್ಕಗಳನ್ನು ಹೊಂದಿಸುವಲ್ಲಿ ಆಗುತ್ತಿರುವ ತೊಂದರೆ, ವಿಲಂಬ, ವಂಚನೆಗಳನ್ನು ತಪ್ಪಿಸಲು ಸಾಧ್ಯವಾಗದಾಗಿದೆ. ಸ್ಟೇಟ್ ಬ್ಯಾಂಕ್ ಮತ್ತು ಅದರ ಏಳು ಸಹಯೋಗ ಬ್ಯಾಂಕುಗಳ 11,289 ಶಾಖೆಗಳ ಮಧ್ಯೆ ನಡೆಯುತ್ತಿರುವ ಅಂತರ ಶಾಖಾ ವ್ಯವಹಾರಗಳ ಸಮನ್ವಯವನ್ನು ಎಷ್ಟೇ ಯಾಂತ್ರೀಕರಣ ಮಾಡಿದರೂ ಅದು ತೃಪ್ತಿಕರವಾಗಿ ದಕ್ಷರೀತಿಯಲ್ಲಿ ನಡೆಯುತ್ತಿಲ್ಲ. ಇದು ಆಡಳಿತಾತ್ಮಕ ತೊಡಕು. ಆದರೆ ಈ ಶಾಖೆಗಳು ಎಲ್ಲೆಲ್ಲಿಯೂ ಪಸರಿಸಿದ್ದಕ್ಕೆ ಇಂದು ಒಬ್ಬ ಶ್ರೀಸಾಮಾನ್ಯನು ಧೈರ್ಯವಾಗಿ ಬ್ಯಾಂಕಿನಲ್ಲಿ ಕಾಲಿಟ್ಟು, ಆರ್ಥಿಕ ಸಹಾಯವನ್ನು ಕೇಳುವ ಧಾರ್ಷ್ಟ್ಯವನ್ನು ಪಡೆದಿದ್ದಾನೆ. ಈಗ ರಾಷ್ಟ್ರೀಕರಣವಾಗದೇ ಖಾಸಗಿ ಕ್ಷೇತ್ರಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ 15 ವಾಣಿಜ್ಯ ಬ್ಯಾಂಕುಗಳ ಬಗ್ಗೆ ಚಿಂತಿಸಬೇಕಾಗಿದೆ. ರಾಷ್ಟ್ರೀಕರಣದ ಕತ್ತಿ ತಲೆಯ ಮೇಲೆ ತೂಗುತ್ತಿರುವುದರಿಂದ ಇವು ಪೂರ್ಣ ಪ್ರಮಾಣದ ಅಭಿವೃದ್ಧಿಯನ್ನು ಸಾಧಿಸುವಲ್ಲಿ ಸಫಲವಾಗಿಲ್ಲ. ಅಲ್ಲದೆ, ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಹಿನ್ನೆಲೆಯಲ್ಲಿ ಕೂಡ ಸಹಕಾರಿ ಬ್ಯಾಂಕುಗಳ ಪಾತ್ರವೇನು ಎಂಬುದನ್ನು ಪುನರ್‌ಪರಿಶೀಲಿಸಬೇಕಾಗಿದೆ. ಒಂದೇ ವಿಧದ ಕಾರ್ಯವನ್ನು ಎರಡು ಸಂಸ್ಥೆಗಳು ಮಾಡಿದರೆ ಒಂದರ ನಕಲು ಇನ್ನೊಂದು ಮಾಡಿದಂತಾಗುತ್ತದೆ ಅಷ್ಟೆ!

## ವೈವಿಧ್ಯೀಕರಣ

ರಾಷ್ಟ್ರೀಕರಣವು ಬ್ಯಾಂಕು ನೀಡುವ ಸಾಲಗಳಲ್ಲಿ ಒಂದು ದೊಡ್ಡ ಕ್ರಾಂತಿಯನ್ನುಂಟುಮಾಡಿದೆ. ಎರಡು ದಶಕಗಳಷ್ಟು ಹಿಂದೆ ವಾಣಿಜ್ಯ ಕ್ಷಿತಿಜದಾಚೆ ಏನಿದೆ ಎಂಬುದನ್ನೂ ತಿಳಿದುಕೊಳ್ಳಲು ಬ್ಯಾಂಕುಗಳು ಸಿದ್ಧವಿರಲಿಲ್ಲ. 1969, ಜೂನ್ ಅಂತ್ಯದಲ್ಲಿ ಒಟ್ಟು ಒದಗಿಸುವ ಉದ್ಧರಿ ಅಥವಾ ಸಾಲ ಕೇವಲ ರೂ. 3,669 ಕೋಟಿ ಇದ್ದಿತು. ಅದು 1988 ಡಿಸೆಂಬರ್ ಅಂತ್ಯದಲ್ಲಿ ರೂ. 87,745 ಕೋಟಿಗೆ ಏರಿ, 23.9ರಷ್ಟು ಬಾಹುಲ್ಯವನ್ನು ತೋರಿಸಿದೆ. ಈ ಸಾಲನೀಡಿಕೆ 1985ರ ಜೂನ್‌ನಲ್ಲಿ ಒಟ್ಟು ರೂ. 53,122 ಕೋಟಿ ಇದ್ದು ಎರಡೂವರೆ ವರುಷಗಳಲ್ಲಿ ರೂ. 24,623 ಕೋಟಿ ಹೆಚ್ಚಿನ ಸಾಲಗಳನ್ನು ವಿತರಿಸಿ, ತಾವಿತ್ತ ಉದ್ಧರಿಯಲ್ಲಿ 25 ಪಟ್ಟು ಹೆಚ್ಚು ಸಾಧನೆಯನ್ನು ಮಾಡಿವೆ. ಆದ್ಯತಾ ವಲಯಗಳಿಗೆ ಕೊಡುವ ಸಾಲಗಳು ಒಟ್ಟು ಸಾಲಗಳ ಪ್ರತಿಶತ ನಲವತ್ತರಷ್ಟು ಇರಬೇಕೆಂದು ಸರಕಾರ ನಿರ್ಧರಿಸಿದ ಗುರಿಯ ಆಚೆಗೆ ಹೋಗಿ 40.8-42.0 ರಷ್ಟು ಸಾಧಿಸಿದೆ. ಭಾರತೀಯ ಸ್ಟೇಟ್ ಬ್ಯಾಂಕು 44.8ರ ವರೆಗೂ ಹೋಗಿದೆ. ಗ್ರಾಮೀಣ ಭಾಗದಲ್ಲಿ ಸಂಚಿತವಾದ ಸಂಪನ್ಮೂಲಗಳು ಕಡಿಮೆ ಇದ್ದರೂ, ಅಲ್ಲಿ ಕೊಟ್ಟಿರುವ ಸಾಲಗಳು ಅಲ್ಲಿಯ ಸಂಪನ್ಮೂಲಗಳಿಗೂ ಹೆಚ್ಚಿವೆ. ಇದೊಂದು ಗ್ರಾಮೀಣ ಭಾಗದ ಆರ್ಥಿಕ ಬೆಳವಣಿಗೆಗೆ ಬ್ಯಾಂಕುಗಳು ಕೊಟ್ಟಿರುವ ಮಹತ್ವದ ಗಮನ. ಗ್ರಾಮೀಣ ಭಾಗದ ಬ್ಯಾಂಕು ಶಾಖೆಗಳು ಆಯಾಹಳ್ಳಿಗಳ ಸಾಮೂಹಿಕ ಸಾಂಸ್ಕೃತಿಕ ಕೇಂದ್ರಗಳಾಗಹತ್ತಿವೆ. ಸಮಗ್ರ ಗ್ರಾಮೀಣ ಅಭಿವೃದ್ಧಿಗಾಗಿ ಕೊಡುತ್ತಿರುವ ಸಾಲಗಳು ಮತ್ತು ಈಗೀಗ ಅನುಷ್ಠಾನಗೊಳ್ಳುತ್ತಿರುವ 'ಸೇವಾ ಕ್ಷೇತ್ರ ದೃಷ್ಟಿಕೋನ' ಸಾಲ ವಿತರಣೆಯಲ್ಲಿ ನಡೆಯುತ್ತಿದ್ದ ಕೆಲ ಅಕ್ರಮಗಳನ್ನು ಬಂದು ಮಾಡಿ ಎಲ್ಲರಿಗೂ ಒಂದು ನಿರ್ದಿಷ್ಟ ಶಾಖೆಯಿಂದ ಸಾಲ ಸಿಗುವಂತೆ ಮಾಡಿದ್ದು ಸ್ವಾಗತಾರ್ಹ. ಆದರೆ ಶಾಖೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಬ್ಯಾಂಕ್ ಸಿಬ್ಬಂದಿಗೆ ತಾವು ಮಾಡಬೇಕಾದ ಕಾರ್ಯದ ಅರಿವಿರದಿದ್ದರೆ, ಈ ಉದ್ದೇಶ ಎಷ್ಟರಮಟ್ಟಿಗೆ ಈಡೇರುವುದೋ ಕಾದು ನೋಡಬೇಕಾಗಿದೆ. ಈ ಯೋಜನೆಯಿಂದ ಬ್ಯಾಂಕು ಬ್ಯಾಂಕುಗಳ ಮಧ್ಯೆ ಸಾಲವಿತರಣೆಯಲ್ಲಿ ನಡೆಯುತ್ತಿದ್ದ ಸ್ಪರ್ಧೆಗೆ ಪೂರ್ಣತೆರೆ ಬಿದ್ದಂತಾಗಿದೆ. ಹಾಗೆ ನೋಡಿದರೆ ಈ ಆದ್ಯತಾ ವಲಯಗಳ ಸೇವೆಗಳು ಲಾಭಕರವಲ್ಲ. ಈ ಉದ್ಧರಿಗಳ ಮೇಲೆ ಲಾಭದ ಬೊಟ್ಟಿಟ್ಟರೆ, ಬ್ಯಾಂಕುಗಳನ್ನು ನಡೆಸುವುದೇ ಕಷ್ಟ.

ಈಗ ಬ್ಯಾಂಕುಗಳ ಮುಂದಿರುವ ಏಕೋದ್ದೇಶಿತ ಧ್ಯೇಯವೆಂದರೆ ಮಾನವ ಸಂಪನ್ಮೂಲಗಳನ್ನು ಅಭಿವೃದ್ಧಿಪಡಿಸುವುದು. ಇಲ್ಲಿ ವಿನಿಯೋಜಿಸಿದ ಹಣಕ್ಕೆ ಸರಿಯಾದ ಲಾಭವನ್ನು ಅಪೇಕ್ಷೆ ಮಾಡುವಂತಿಲ್ಲ. ಇದು ಸಾಮಾಜಿಕ ಸುಧಾರಣೆಯಲ್ಲಿ ಹುದುಗಿಸುವ ಬಂಡವಾಳವಿದ್ದಂತೆ. ಇದರ ಫಲ ಇನ್ನೊಂದು ದಶಕದ ಮೇಲೆ ತಾನೇತಾನಾಗಿ ಬಿಡುತ್ತದೆ. ಬ್ಯಾಂಕುಗಳು ಹಿಂದಿನ ಬಿಗುವು, ಆಢ್ಯತೆ, ಮಡಿವಂತಿಗೆ ಬಿಟ್ಟು, ರಟ್ಟೆ ಗಟ್ಟಿಯಿದ್ದ ಮತ್ತು ಮೆದುಳು ಚುರುಕಿದ್ದ ನಂಬಿಕೆಯ ಶ್ರೀಸಾಮಾನ್ಯರಿಗೆ ಬ್ಯಾಂಕಿನ ಸಹಾಯವನ್ನು ಕೊಡುತ್ತವೆ. ಯಾರಿಗೆ ಉದ್ದಿಮೆಯ ಬಗ್ಗೆ ಯಾವ ಕಲ್ಪನೆಯೂ ಇಲ್ಲವೋ,

ಆದರೆ, ಉದ್ದಿಮೆ ಮಾಡಬೇಕೆಂದು ಉತ್ಸಾಹವಿದೆಯೋ, ಅಂತಹವರಿಗೆ ತರಬೇತಿಯನ್ನಿತ್ತು, ಉದ್ದರಿ ಒದಗಿಸಿ, ಅವರನ್ನು ಅವರು ತಮ್ಮ ಕಾಲ ಮೇಲೆ ನಿಲ್ಲುವಂತೆ ಮಾಡುವ ಒಂದು ಪ್ರಯತ್ನವನ್ನು ಕಳೆದ ಒಂದೂವರೆ ದಶಕಗಳಿಂದಲೂ ಬ್ಯಾಂಕುಗಳು ಮಾಡುತ್ತಾ ಬಂದಿವೆ. ಇದರಲ್ಲಿ ಅವು ಸಾಕಷ್ಟು ಪ್ರಗತಿಯನ್ನೂ ಸಾಧಿಸಿವೆ. ಬ್ಯಾಂಕುಗಳು ಚುರುಕಿನಿಂದ ಕೆಲಸ ಮಾಡುವಲ್ಲಿ ಅವರು ಸಮಾಜಕ್ಕೆ ತಾವೊಂದು ಉಪಕಾರವನ್ನು ಮಾಡುವೆವೆಂಬ ಭಾವನೆಯನ್ನು ತಾಳಬೇಕಿಲ್ಲ. ಬ್ಯಾಂಕು ಬೆಳೆದರೆ ಅವರೂ ಬೆಳೆಯುತ್ತಾರೆ. ಇಂದು ಬ್ಯಾಂಕ್ ಸಿಬ್ಬಂದಿ ಗೌರವದಿಂದ ತಲೆ ಎತ್ತಿ ಸಮಾಧಾನದ ಉಸಿರನ್ನು ಎಳೆಯಲು ಈ ಎರಡು ದಶಕಗಳಲ್ಲಿ ನಡೆದ ಬ್ಯಾಂಕಿನ ಸಾಧನೆಯೇ ಕಾರಣ. ಈ ಮಹಾಯಜ್ಞದಲ್ಲಿ ಸರಕಾರ ದೊಡ್ಡ ಪಾತ್ರವನ್ನಾಡಿದೆ. ಅಂದು ಬ್ಯಾಂಕ್ ರಾಷ್ಟ್ರೀಕರಣದ ಬಗ್ಗೆ ದೃಢವಾದ ನಿಲುವನ್ನು ಸರಕಾರ ತಳೆಯದೆ ಹೋಗಿದ್ದರೆ, ಇವತ್ತಿನ ಬ್ಯಾಂಕಿನ ಈ ಚಿತ್ರವನ್ನು ನೋಡಲಿಕ್ಕೆ ಸಾಧ್ಯವಾಗುತ್ತಿರಲಿಲ್ಲ. ಸಾರ್ವಜನಿಕ ವೇದಿಕೆಯ ಮೇಲೆ ನಿಂತು ಸಾಲಗಳನ್ನು ವಿತರಿಸಿದಾಗ ಕೆಲವರು ಅದರಲ್ಲಿ ರಾಜಕೀಯತೆ ಬೆರೆತಿದೆ ಎಂದು ಆಪಾದಿಸಿದರೂ, ಅದರಲ್ಲಿ ಸಾಲ ಪಡೆದ ಹಲವರು ಗೌರವದಿಂದ ಜೀವಿಸಲು ಸಹಾಯವಾಗಿದೆ. ಆದ್ದರಿಂದ ಕೆಲವರಿಗೆ ಬ್ಯಾಂಕ್ ಕಟ್ಟೆಗಳನ್ನು ಹತ್ತಿ ತಮಗೇಕೆ ಸಾಲಗಳನ್ನು ಕೊಟ್ಟಿಲ್ಲ ಎಂದು ಕೇಳುವ ಮನೋಧೈರ್ಯ ಬಂದಿದೆ.

ಠೇವುಗಳನ್ನು ಸ್ವೀಕರಿಸಿ, ಭದ್ರತೆ ಒದಗಿಸಿ, ವಿಶ್ವಾಸಾರ್ಹರಾದವರಿಗಷ್ಟೇ ಸಾಲವನ್ನು ಕೊಡುತ್ತಿದ್ದ ಬ್ಯಾಂಕುಗಳು ರಾಷ್ಟ್ರೀಕರಣದ ನಂತರ ಸಂಪೂರ್ಣ ಬದಲಾಗಿವೆ. ಬಳಕೆದಾರನ ಪತ್ತು (ಕಂಜ್ಯೂಮರ್ ಕ್ರೆಡಿಟ್), ಉತ್ತೇಜಕ ಬಂಡವಾಳ (ವೆಂಚರ್ ಕ್ಯಾಪಿಟಲ್), ಗೃಹನಿರ್ಮಾಣ ಸಾಲ, ವಿಶ್ವಾಸಪತ್ರ (ಕ್ರೆಡಿಟ್ ಕಾರ್ಡ್), ಗುತ್ತಿಗೆ ವ್ಯವಹಾರ (ಲೀಜಿಂಗ್) ವಣಿಕ ಬ್ಯಾಂಕಿಂಗ್(ಮರ್ಚೆಂಟ್ ಬ್ಯಾಂಕಿಂಗ್), ಪಾರಸ್ಪರಿಕ ಸಹಾಯ ನಿಧಿ (ಮ್ಯುಚುಅಲ್ ಫಂಡ್), ಬಂಡವಾಳ ಮಾರುಕಟ್ಟೆ (ಕ್ಯಾಪಿಟಲ್ ಮಾರ್ಕೆಟ್) ಮೊದಲಾದ, ಹಿಂದೆಂದೂ ಊಹಿಸದ ಉದ್ದೇಶಗಳಿಗೆ ಇಂದು ಬ್ಯಾಂಕುಗಳು ಸಾಲಗಳನ್ನು ಕೊಡಹತ್ತಿವೆ. ಸಟ್ಟಾ ವ್ಯಾಪಾರಗಳಂತಹ ಊಹಾಪೋಹಕ್ಕೆ ಅವಕಾಶವಿರುವ ವ್ಯವಹಾರವನ್ನು ಬ್ಯಾಂಕುಗಳು ಸಾಗಿಸಿಕೊಂಡು ಹೋಗಲು ನಿರ್ಬಂಧಗಳಿರುವದರಿಂದ ಬಂಡವಾಳ ಮಾರುಕಟ್ಟೆ, ಗುತ್ತಿಗೆ ವ್ಯವಹಾರಗಳನ್ನು ತಮ್ಮ ಉಪಸಂಸ್ಥೆಗಳ ಮೂಲಕ ನಡೆಸುತ್ತಿವೆ. ಇವುಗಳಲ್ಲಿ ತೊಡಗಿಸಿದ ಹಣವನ್ನು ಹೆಚ್ಚು ಲಾಭದಾಯಕ ಉದ್ದಿಮೆಗಳಲ್ಲಿ ತೊಡಗಿಸಿ, ಅದರಿಂದ ಬಂದ ಹೆಚ್ಚಿನ ಲಾಭವನ್ನು ಹಣ ತೊಡಗಿಸಿದವರಿಗೆ ಕೊಡುವುದೇ ಈ ಹೊಸ ವಿಧಾನಗಳ ಉದ್ದೇಶ. ಬ್ಯಾಂಕುಗಳು ಸಾಮಾನ್ಯವಾಗಿ ಕೊಡುವ ಬಡ್ಡಿ ಹೆಚ್ಚುಹೆಚ್ಚೆಂದರೆ ಪ್ರತಿ ಶತ ಹತ್ತು ರೂಪಾಯಿ. ಅದಕ್ಕಿಂತಲೂ ಹೆಚ್ಚಿನ ಆದಾಯವನ್ನು ಒದಗಿಸಲು ಈ ಯೋಜನೆಗಳನ್ನು ಹಮ್ಮಿಕೊಂಡಿದೆ. ಇವುಗಳಲ್ಲಿ ಹಣ ಹೂಡಿಸಲು ಏಜೆಂಟರನ್ನು ನಿಯಮಿಸಿಕೊಂಡು ಅವರಿಗೆ ಕಮೀಶನ್ನನ್ನೂ ಕೂಡ ಕೊಡುತ್ತಾರೆ. ಇದು ಸಾಮಾನ್ಯ ಬ್ಯಾಂಕ್ ಸಂಪನ್ಮೂಲಗಳ ಸಂಗ್ರಹಣೆಗೆ ವಿರೋಧವಾದರೂ ಬ್ಯಾಂಕುಗಳು ಉಪಸಂಸ್ಥೆಗಳನ್ನು ರಚಿಸಿ ಇದಕ್ಕಾಗಿ ಅಪಾರ ಹಣವನ್ನು ವ್ಯಯಿಸುತ್ತವೆ. ಇವೆಲ್ಲವುಗಳೂ ರಾಷ್ಟ್ರೀಕರಣದ ನಂತರ ಹಬ್ಬಿಕೊಂಡ ಹೊಸ ಆಯಾಮಗಳು.

## ಸವಾಲುಗಳು

ಈ ಎರಡು ದಶಕಗಳಲ್ಲಿ ನಡೆದು ಬ್ಯಾಂಕಿನ ಕಾರ್ಯವಿಧಾನವನ್ನು ವಿಶ್ಲೇಷಿಸಿದರೆ, ಸಾಂಪ್ರದಾಯಿಕ ವ್ಯವಹಾರ ನಿಂತಂತಾಗಿ, ಹೊಸ ಬಗೆಯ ಗ್ರಾಹಕರಿಗೆ ಹೊಸ ಹೊಸ ಸೌಲಭ್ಯಗಳನ್ನು ಒದಗಿಸಹತ್ತಿದೆ. ಆದ್ಯತಾ ವಲಯಗಳಲ್ಲಿ ಬರುವ ಸಣ್ಣ ಉದ್ದಿಮೆಗಳು, ಕೃಷಿ, ಕೃಷಿಅವಲಂಬಿತ ಹೈನುಗಾರಿಕೆ, ಹಂದೀಸಾಕಾಣಿಕೆ, ಕೋಳಿಸಾಕಾಣಿಕೆಗಳಂತಹ ಉಪ ದಂಧೆಗಳು, ಸ್ವಯಂ ವೃತ್ತಿಯಲ್ಲಿ ತೊಡಗಿದವರು, ಕೈಗಾಡಿ–ಬೀದಿಬೀದಿಯಲ್ಲಿ ಕುಳಿತು ಸಣ್ಣ ವ್ಯಾಪಾರ ನಡೆಸುವವರು, ಕೊಳಚೆ ಪ್ರದೇಶದಲ್ಲಿ ವಾಸಿಸುವವರು, ಹಗ್ಗ ಹೊಸೆಯುವವರು, ಮಡಿಕೆ ಮಾಡುವವರು, ಕೀಲಿ–ಛತ್ರಿ ದುರಸ್ತಿ ಮಾಡುವವರು, ಕಸ–ಮುಸುರೆ–ಭಂಗಿ ಕೆಲಸ ಮಾಡುವವರು, ಪೌರೋಹಿತ್ಯದಲ್ಲಿ ತೊಡಗಿದವರು ಆರ್ಥಿಕ ಅಭಿವೃದ್ಧಿಗಳಿಗಾಗಿ ಸಾಲಗಳನ್ನು ಪಡೆಯಲು ಅರ್ಹರಾಗಿದ್ದಾರೆ. ಇವರೆಲ್ಲರೂ ಒಂದು ಕಾಲಕ್ಕೆ ಆರ್ಥಿಕ ಸಹಾಯದಿಂದ ವಂಚಿತರಾಗಿದ್ದರು. ಪ್ರಾಯಶಃ ಸರಕಾರ, ಜನರು ಈ ಬ್ಯಾಂಕುಗಳ ಮೇಲೆ ಒತ್ತಾಯವನ್ನು ಹೇರದಿದ್ದರೆ ಖಂಡಿತ ಈ ಬ್ಯಾಂಕುಗಳು ಇನ್ನೂ ಶ್ರೀಮಂತರನ್ನೇ ಅವಲಂಬಿಸುತ್ತಿದ್ದವೇನೊ. ಬ್ಯಾಂಕಿನವರಿಗೆ ಈಗ ಗ್ರಾಮಗಳಿಗೆ ಹೋಗಿ ಸಾಲವನ್ನೀಯುವ ಸಂದರ್ಭ ಬಂದಿದೆ. ಈಗ ಸಮಾಜವು ಆರ್ಥಿಕ ಅಸಮಾನತೆಯ ಮೇಲೆ ವಿಭಜನೆಗೊಳ್ಳಹತ್ತಿದೆ. ಹಸಿದವರು–ಹೊಟ್ಟೆತುಂಬಿದವರು, ಭದ್ರವಾದ ವೃತ್ತಿಯಲ್ಲಿದ್ದು ಕೈತುಂಬ ಸಂಬಳ ತರುವವರು, ಅರೆಗೂಲಿಯಲ್ಲಿ ಯಾವ ಭದ್ರತೆಗಳಿಲ್ಲದೆ ಕಷ್ಟಪಡುವವರು ಎಂದು ಹೊಸ ವರ್ಗಗಳು ನಿರ್ಮಾಣವಾಗುತ್ತಿವೆ. ಈ ಜನರು ಒಡ್ಡುವ ಸವಾಲುಗಳಿಗೆ ಆರ್ಥಿಕ ಸಂಸ್ಥೆಗಳಾದ ಬ್ಯಾಂಕುಗಳು ಸ್ಪಂದಿಸದಿದ್ದರೆ ಕ್ರಾಂತಿಯ ಜ್ವಾಲಾಮುಖಿ ಆಸ್ಫೋಟಿಸುವದರಲ್ಲಿ ಸಂಶಯವೇ ಇಲ್ಲ. ಹೊಲದಲ್ಲಿ ದುಡಿಯುವ ಕಾರ್ಮಿಕರು, ದುಡಿಯದೇ ಕೃಷಿ ವ್ಯವಸಾಯದಲ್ಲಿ ತೊಡಗಿದ ಭೂಮಾಲೀಕರಿಂದ ಬರುವ ಕೃಷಿ ಉತ್ಪನ್ನದಲ್ಲಿ ಪಾಲುಕೇಳುವ ದಿವಸಗಳು ತೀರ ಸಮೀಪಿಸಹತ್ತಿವೆ. ವಸತಿಹೀನರು ತೆರವಿದ್ದ ಪಿಸಾಲ ಮನೆಗಳಿಗೆ ಹೋಗಿ ವಾಸಿಸಲು ಸೌಕರ್ಯ ಕೇಳುವ ದಿವಸಗಳೂ ದೂರಲಿಲ್ಲ. ಈ ನಲವತ್ತು ವರುಷಗಳ ಸ್ವಾತಂತ್ರ್ಯೋತ್ತರ ದಿವಸಗಳಲ್ಲಿ ದಾರಿದ್ರ್ಯ ನಿರ್ಮೂಲನ ಸಾಧನೆಯ ಸ್ಪಷ್ಟ ಚಿತ್ರ ಕಂಡು ಬರುವಲ್ಲದು. ಈ ಸವಾಲುಗಳನ್ನು ಬ್ಯಾಂಕುಗಳು ಎದುರಿಸಬೇಕಾದ ಸಾಧ್ಯತೆಗಳು ಹೆಚ್ಚಾಗಿವೆ.

ಇನ್ನೊಂದೆಡೆ ಸಣ್ಣ ಉದ್ದಿಮೆದಾರರು ಒಂದಿಲ್ಲ ಒಂದು ರೀತಿಯ ಸವಲತ್ತುಗಳನ್ನು ಕೇಳುತ್ತಲೇ ಹೋಗಹತ್ತಿದ್ದಾರೆ. ನಿಜವಾಗಿ ನೋಡಿದರೆ, ಠೇವಣಿದಾರನೇ ಬ್ಯಾಂಕುಗಳಿಂದ ಯಾವ ಸವಲತ್ತುಗಳನ್ನೂ ಕೇಳುವಂತಿಲ್ಲ. ಅವನೇ ಬ್ಯಾಂಕಿನ ಕೇಂದ್ರವ್ಯಕ್ತಿ. ಗ್ರಾಹಕನ ಉಳಿತಾಯ ಖಾತೆಯಲ್ಲಿ ಹಣ ಎರಡು ವರುಷ ಕೊಳೆಯುತ್ತ ಬಿದ್ದರೂ, ಅವನಿಗೆ ಸಾವಧಿ ಠೇವುಗಳ ಮೇಲೆ ಕೊಡುವ ಬಡ್ಡಿಯನ್ನು ಕೇಳುವ ಹಕ್ಕಿಲ್ಲ. ಕಾರಣ, ಗ್ರಾಹಕನು ಬ್ಯಾಂಕಿನೊಂದಿಗೆ ಮಾಡಿಕೊಂಡ ಗುತ್ತಿಗೆ ಅವಧಿ ಕುತ್ತಿಗೆಗೆ ಮುಳುವಾಗುತ್ತದೆ, ಇದರತ್ತ ಗಮನ ಹರಿಯಬೇಕು.

ಇಂದು ಜನರು ಓಡುತ್ತಿರುವ ಜಗತ್ತಿನ ಆಗುಹೋಗುಗಳನ್ನು ನೋಡಿ ಅತೃಪ್ತರಾಗಹತ್ತಿದ್ದಾರೆ. ಅಸಮಾಧಾನಪಡಹತ್ತಿದ್ದಾರೆ. ಬ್ಯಾಂಕಿನಲ್ಲಿ ಕಾಲಿಟ್ಟೊಡನೆ ಅವರಿಗೆ ಧೀಡಿರ ಸೇವೆ ಬೇಕು. ಚೆಕ್ಕುಗಳನ್ನಿತ್ತ ಮೂರು ದಿವಸಗಳಲ್ಲಿ ಅವು ಅವರ ಖಾತೆಗೆ ಜಮೆ ಆಗಬೇಕು. ಈ ಸವಾಲುಗಳನ್ನು ಎದುರಿಸಲು ಬ್ಯಾಂಕುಗಳು ತಮ್ಮ ಸಂಪರ್ಕ ಜಾಲವನ್ನು ತೀವ್ರಗೊಳಿಸಹತ್ತಿವೆ. ತಮ್ಮವೇ ಸಂಪರ್ಕ ಜಾಲಗಳನ್ನು ನಿರ್ಮಿಸಿಕೊಂಡು ಕ್ಷಿಪ್ರ ಹಣ ರವಾನೆಗೆ ವ್ಯವಸ್ಥೆ ಮಾಡಿವೆ. ಖಾಸಗಿ ವಲಯದ ಹರಿಕಾರರ ಸೇವೆಯನ್ನು ಪಡೆದು ಒಂದೇ ದಿವಸದಲ್ಲಿ ಚೆಕ್‌ಗಳನ್ನು ದೂರದ ಊರಿಗೆ ರವಾನಿಸುತ್ತಾರೆ. ಆದರೆ ಬ್ಯಾಂಕುಗಳು ಈ ಖಾಸಗಿ ವಲಯದ ಸೇವೆಗಳನ್ನು ಬಳಸಿಕೊಳ್ಳುವದರಿಂದ ಉದ್ಭವಿಸಬಹುದಾದ ಕಾನೂನಿನ ತೊಡಕಿನತ್ತ ಇನ್ನೂ ಗಮನವನ್ನು ಹರಿಸಿದಂತಿಲ್ಲ. ಬ್ಯಾಂಕುಗಳು ಬಳಸಿಕೊಳ್ಳುವ ಹೊರಗಿನಸೇವೆ, ಸಾಧನೆ ಸಂಪರ್ಕಗಳನ್ನು ಸರಕಾರದ ಕಾನೂನಿನ ಕಕ್ಷೆಯಲ್ಲಿ ತಂದರೆ, ಗ್ರಾಹಕರು ನ್ಯಾಯಾಲಯದ ಕಟ್ಟೆಯನ್ನು ಹತ್ತಿದಾಗ, ಬ್ಯಾಂಕಿನವರಿಗೆ ರಕ್ಷಣೆ ದೊರೆಯುತ್ತವೆ.

## ಬ್ಯಾಂಕುಗಳ ಲಾಭ

ಬ್ಯಾಂಕುಗಳ ಅಧಿಕೃತ ಮತ್ತು ಸಂದಾಯವಾದ ಬಂಡವಾಳ ಈಗ ಹೆಚ್ಚಿವೆ. ಅಲ್ಲದೆ, ಲಾಭದಲ್ಲಿ ಮೀಸಲಿರಿಸುವ ಗಂಗಾನಿಧಿ (ರಿಝರ್ವ್ ಫಂಡ್ಸ್) ಕೂಡ ಬೆಳೆಯಹತ್ತಿವೆ. ಇದರಿಂದ ಪರದೇಶದ ಬ್ಯಾಂಕುಗಳು ಭಾರತೀಯ ಬ್ಯಾಂಕುಗಳನ್ನು ವಿಶ್ವಾಸದಲ್ಲಿ ತೆಗೆದುಕೊಳ್ಳುವಂತಾಗಿವೆ. ಬ್ಯಾಂಕುಗಳ ಲಾಭವೇನೋ ಹೆಚ್ಚುತ್ತ ನಡೆದಿದೆ. ಆದರೆ ಇದು ವಾಸ್ತವಿಕ ಲಾಭವಲ್ಲ. ಸಾಲಗಳ ಮೇಲೆ ವಿಧಿಸುವ ಮಾಸಿಕ/ತ್ರೈಮಾಸಿಕ/ವಾರ್ಷಿಕ ಬಡ್ಡಿಯನ್ನು ಗ್ರಾಹಕರು ಕಾಲಕಾಲಕ್ಕೆ ಪಾವತಿ ಮಾಡುವುದಿಲ್ಲ.

[ಮುಂದಿನ ಪುಟ ನೋಡಿ

# ಪ್ರಶ್ನೋತ್ತರ

ಬ್ಯಾಂಕಿಂಗ್ ಮತ್ತು ತತ್ಸಂಬಂಧದ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ವಾಚಕರ ಪ್ರಶ್ನೆಗಳಿಗೆ ಈ ವಿಭಾಗದಲ್ಲಿ ಉತ್ತರ ನೀಡಲಾಗುತ್ತದೆ

## ಪ್ರಶ್ನೆ ೧

**ಹೊಸ ಬ್ಯಾಂಕಿಂಗ್ ಮತ್ತು ಸಾರ್ವಜನಿಕ ಹಣಕಾಸು ಸಂಸ್ಥೆಗಳ ಕಾನೂನುಗಳ (ತಿದ್ದುಪಡಿ) ಅಧಿನಿಯಮ —1988 (ಪರಕ್ರಾಮ್ಯ ಸಂಲೇಖಗಳ ಅಧಿನಿಯಮ 1981ರ ತಿದ್ದುಪಡಿ) ಕಾಯಿದೆಯನ್ವಯ ಚೆಕ್ಕುಗಳು ವಾಪಸಾದರೆ ಯಾರು ದೂರು ಕೊಡಬಹುದು ಮತ್ತು ಅದರ ಪ್ರಕ್ರಿಯೆಯೇನು ?**

**ರಾಜಾರಾಂ ಹೆಗಡೆ**
**ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು**

ಈ ತಿದ್ದುಪಡಿ ಅಧಿನಿಯಮ 1–4–1989ರಿಂದ ಜಾರಿಯಲ್ಲಿ ಬಂದಿದೆ. ಇದರ ರೀತ್ಯ, ಚೆಕ್ಕುಗಳನ್ನು ಋಣವಿಮುಕ್ತಿಗೊಳಿಸಲೋಸುಗ ಅಥವಾ ಯಾವದೇ ಬಾಧ್ಯತೆಗನುಗುಣವಾಗಿ ನೀಡಿದಲ್ಲಿ, ಖಾತೆಯಲ್ಲಿ ಸಾಕಷ್ಟು ಮೊಬಲಗಿಲ್ಲದಿದ್ದಲ್ಲಿ ಅಥವಾ ಬ್ಯಾಂಕಿನೊಂದಿಗೆ ಮಾಡಿಕೊಂಡ ವ್ಯವಸ್ಥೆಯ ಮಿತಿಯನ್ನು ಮೀರಿದ್ದರೆ ಅದು ಅಪರಾಧಿಕ ಕಾರ್ಯವಾಗುವುದು.

ದೂರನ್ನು ಚೆಕ್ಕಿನ ಪ್ರಾಪ್ತಿಕರ್ತ ಅಥವಾ ಕ್ರಮಪ್ರಾಪ್ತಧಾರಕನು ಮಾತ್ರ ನೀಡಬಹುದು. ಚೆಕ್ಕು ಮೇಲೆ ತಿಳಿಸಲಾದ ಕಾರಣಗಳಿಂದಾಗಿ ವಾಪಸಾಗಿದ್ದರೆ, 15 ದಿನಗಳೊಳಗಾಗಿ ಪಾವತಿ ಮಾಡುವಂತೆ ತಿಳಿಸಿ ತಿಳಿವಳಿಕೆ ನೀಡಬೇಕಾಗುತ್ತದೆ. ಒಂದು ವೇಳೆ ರಚಕ ಹಣ ಪಾವತಿ ಮಾಡದೇ ಹೋದಲ್ಲಿ, ಅಭಿಯೋಜನೆ ಮಾಡಬಹುದಾಗಿದೆ. ದೂರನ್ನು ಒಂದು ತಿಂಗಳ ಒಳಗಾಗಿ (15 ದಿವಸಗಳ ಅವಧಿಯ ಸಮಾಪ್ತಿಯಿಂದ) ಕೊಡಬೇಕು. ಮೆಟ್ರೊಪಾಲಿಟನ್ ಮ್ಯಾಜಿಸ್ಟ್ರೇಟ್ ಅಥವಾ ಮೊದಲನೆಯ ವರ್ಗದ ಮ್ಯಾಜಿಸ್ಟ್ರೇಟ್ ನ್ಯಾಯಾಲಯಗಳಿಗಿಂತ ಕಡಿಮೆ ದರ್ಜೆಯವಲ್ಲದ ನ್ಯಾಯಾಲಯಗಳು ಮಾತ್ರ ಈ ಅಪರಾಧದ ವಿಚಾರಣೆ ನಡೆಸಬಹುದಾಗಿದೆ. ಒಂದು ವೇಳೆ ಅಪರಾಧ ಸಾಬೀತಾದಲ್ಲಿ, ಒಂದು ವರ್ಷದ ವರೆಗೆ ಕಾರಾವಾಸ, ಅಥವಾ ಚೆಕ್ಕಿನ ಹಣದ ಎರಡರಷ್ಟು ಜುಲ್ಮಾನೆ, ಅಥವಾ ಕಾರಾವಾಸ ಮತ್ತು ಜುಲ್ಮಾನೆ ಎರಡನ್ನೂ ವಿಧಿಸಬಹುದಾಗಿದೆ. *

## ಪ್ರಶ್ನೆ ೨

## ಕಂಪನಿ ಪಾಲುದಾರಿಕೆಯಲ್ಲಿ ಪಾಲುದಾರನಾಗಬಹುದೆ ?

ಪಾಲುದಾರಿಕೆಯಲ್ಲಿ ಕಂಪನಿಯು ಪಾಲುದಾರನಾಗುವ ಸಾಧ್ಯತೆಯ ಬಗೆಗಿನ ಪ್ರಶ್ನೆ ಇತ್ತೀಚೆಗೆ ಎಮ್. ಎಮ್. ಪುರಿಮೂಡ್ ವಿರುದ್ಧ ಫರ್ಮುಗಳ ರಿಜಿಸ್ಟ್ರಾರ್ ವ್ಯಾಜ್ಯದಲ್ಲಿ ಕೇರಳ ಉಚ್ಚ ನ್ಯಾಯಾಲಯದೆದುರು ಬಂತು.

ಈ ವ್ಯಾಜ್ಯದ ವಿವರಗಳು ಇಂತಿವೆ : ಏಳು ಪಾಲುದಾರರನ್ನು ಹೊಂದಿದ ಪಾಲುದಾರಿಕೆಯೊಂದು (ಅದರಲ್ಲಿ ಕಂಪನಿಯೂ ಒಬ್ಬ ಪಾಲುದಾರನಾಗಿತ್ತು) ಫರ್ಮುಗಳ ರಿಜಿಸ್ಟ್ರಾರ್ ಬಳಿಯಲ್ಲಿ ಭಾರತೀಯ 1932ರ ಪಾಲುದಾರಿಕೆ ಅಧಿನಿಯಮದ ರೀತ್ಯ ನೊಂದಾಯಿಸಲು ಅರ್ಜಿ ಸಲ್ಲಿಸಿತು. ಆದರೆ ರಿಜಿಸ್ಟ್ರಾರ್ ಅವರು ಕಂಪನಿಯು ಪಾಲುದಾರನಾಗಲು ಸಾಧ್ಯವಿಲ್ಲವೆಂಬ ಕಾರಣಕ್ಕಾಗಿ ಅದರ ಅರ್ಜಿಯನ್ನು ತಿರಸ್ಕರಿಸಿತು. ಪಾಲುದಾರಿಕೆಯು ರಿಜಿಸ್ಟ್ರಾರ್ ಅವರಿಗೆ ಸಮಜಾಯಿಸಿ ನೀಡಲು ಹಲವು ಬಾರಿ ಯತ್ನಿಸಿದಾಗ್ಯೂ ರಿಜಿಸ್ಟ್ರಾರ್ ಅವರು ನೊಂದಾಯಿಸಲು ಒಪ್ಪದಾದಾಗ ಪಾಲುದಾರಿಕೆಯು ರಿಜಿಸ್ಟ್ರಾರ್ ವಿರುದ್ಧ ಕೇರಳ ಉಚ್ಚನ್ಯಾಯಾಲಯದಲ್ಲಿ ರಿಟ್ ಅರ್ಜಿಯನ್ನು ಸಲ್ಲಿಸಿತು.

1932ರ ಭಾರತೀಯ ಪಾಲುದಾರಿಕೆ ಅಧಿನಿಯಮದ ಪ್ರಕರಣ 4ನ್ನು ನ್ಯಾಯಾಲಯ ಕೂಲಂಕಷವಾಗಿ ಪರಿಶೀಲಿಸಿತು. ಅದರ ರೀತ್ಯ ಪಾಲುದಾರಿಕೆ ಒಂದು ವ್ಯವಹಾರದ ಲಾಭವನ್ನು ಹಂಚಿಕೊಳ್ಳುವ ಉದ್ದೇಶದಿಂದ ವ್ಯಕ್ತಿಗಳು ಮಾಡಿಕೊಂಡ ಒಪ್ಪಂದ. ಈ ವ್ಯವಹಾರವನ್ನು ಆ ವ್ಯಕ್ತಿಗಳೆಲ್ಲರೂ ಅಥವಾ ಅವರ ಪರವಾಗಿ ಅವರ ಪೈಕಿ ಯಾರಾದರೂ ನಡೆಸುತ್ತಾರೆ. ಒಪ್ಪಂದ ಮಾಡಿಕೊಂಡ ವ್ಯಕ್ತಿಗಳು ವೈಯಕ್ತಿಕವಾಗಿ ಪಾಲುದಾರರೆನಿಸುತ್ತಾರೆ. ಸಾಮೂಹಿಕವಾಗಿ ಅವರು ಫರ್ಮ್ ಎನಿಸಿಕೊಳ್ಳುತ್ತಾರೆ. ಹೀಗೆ ಪ್ರಕರಣ 4ರಲ್ಲಿ ಕಂಪನಿಯು ಪಾಲುದಾರನಾಗಲು ಯಾವುದೇ ಪ್ರತಿಬಂಧವಾಗಲಿ, ನಿಷೇಧವಾಗಲಿ ಇಲ್ಲ. ಮೇಲಿನ ವ್ಯಾಖ್ಯೆಯಲ್ಲಿ ಬಳಸಲಾದ 'ವ್ಯಕ್ತಿ'ಗಳ ಅರ್ಥವನ್ನು 1892ರ ಸಾಮಾನ್ಯ ಖಂಡಗಳ ಅಧಿನಿಯಮದ ಹಿನ್ನೆಲೆಯಲ್ಲಿಯೂ ನ್ಯಾಯಾಲಯ ಪರಿಶೀಲಿಸಿತು. ಅದರ ರೀತ್ಯ ಕಂಪನಿ, ಸಂಘ, ಸಂಸ್ಥೆ ಅಥವಾ ವ್ಯಕ್ತಿ ಸಮೂಹವನ್ನು 'ವ್ಯಕ್ತಿ' ವ್ಯಾಖ್ಯೆ ಒಳಗೊಂಡಿರುವುದರಿಂದ, ಕಂಪನಿಯೂ ವ್ಯಕ್ತಿಯೆಂದೇ ಪರಿಗಣಿಸಬೇಕಾದುದರಿಂದ ಅದಕ್ಕೆ ಪಾಲುದಾರನಾಗಲು ಅರ್ಹತೆಯಿದೆಯೆಂದು ತಿಳಿಸಿ ಪಾಲುದಾರಿಕೆಯನ್ನು ನೊಂದಾಯಿಸಲು ರಿಜಿಸ್ಟ್ರಾರ್ ಅವರಿಗೆ ನ್ಯಾಯಾಲಯ ಆದೇಶ ನೀಡಿತು. *

## ಸಂಪನ್ಮೂಲಗಳ ಸಂಗ್ರಹಣೆ ಮತ್ತು ವಿವಿಧೀಕರಣ

11ನೆಯ ಪುಟದಿಂದ ಮುಂದುವರಿದುದು]

ಆದರೂ ಅವರು ಖಾತೆಗೆ ಖರ್ಚುಹಾಕಿ ಲಾಭವೆಂದು ಗಣಿಸುತ್ತಾರೆ. ಇದು ಒಂದು ದೃಷ್ಟಿಯಿಂದ ಕಾಲ್ಪನಿಕ ಆದಾಯ. ಇದನ್ನು ಬ್ಯಾಂಕರರು ರಿಸಿವೇಬಲ್ ಅಥವಾ ಪ್ರಾಪ್ಯ ಎಂದು ಕರೆಯಲು ಸಿದ್ಧರಿಲ್ಲ. ನಿಜವಾದ ಅರ್ಥದಲ್ಲಿ ಸಂದಾಯವಾಗದ ಬಡ್ಡೀ ಹಣವೆಲ್ಲಾ ಪ್ರಾಪ್ಯವೇ. ಆದರೆ ಸಂದಾಯವಾದ ಬಡ್ಡಿ ಎಷ್ಟು? ಸಾಲಗಾರನ ಖಾತೆಗೆ ಖರ್ಚುಹಾಕಿ ಕಾಲ್ಪನಿಕ ಲಾಭವೆಂದು ಗಣಿಸಿದ ಬಡ್ಡಿ ಎಷ್ಟು ? ಎಂಬುದನ್ನು ಕಂಡುಹಿಡಿಯುವ ವಿಧಾನ ಬ್ಯಾಂಕಿನಲ್ಲಿ ಬಳಕೆಗೆ ಬರಬೇಕು. ಆಗ ನಿಜವಾದ ಲಾಭ ಎಷ್ಟೆಂಬುದು ಮತ್ತು ಲಾಭದಲ್ಲಿ ಖಟ್ಟಾಬಾಕಿಯಾಗಬಹುದಾದ, ಆದರೆ ಲಾಭಾಂಶಕ್ಕೆ ಸೇರಿಹೋದ ಬಡ್ಡಿ ಎಷ್ಟೆಂಬುದು ಖಚಿತವಾಗಿ ತಿಳಿಯುತ್ತದೆ. ದಿನದಿನಕ್ಕೂ ದೊಡ್ಡ/ಸಣ್ಣ ಉದ್ದಿಮೆಗಳ ಅನಾರೋಗ್ಯತೆಯಿಂದ ಬೆಳೆಯುತ್ತಿರುವ ಬಾಕಿ, ಖಟ್ಟಾ ಬಾಕಿಯಾಗುತ್ತಾ ನಡೆದ ಕೃಷಿ ಮತ್ತು ಕೃಷೀತರ ಸಾಲಗಳ ದೊಡ್ಡ ಮೊತ್ತವನ್ನು ನೋಡಿದರೆ, ಬ್ಯಾಂಕುಗಳ ಲಾಭ ಮತ್ತು ಆಸ್ತಿಯ ಮೇಲೆ ಬಲವಾದ ಪರಿಣಾಮವಾಗಬಹುದೇನೋ! ಕೆಲದಿವಸಗಳಲ್ಲಿ ಬಡ್ಡಿಯನ್ನಷ್ಟೇ ವಸೂಲಿ ಮಾಡುವ ಕ್ಷಿಪ್ರಕ್ರಮಗಳ ಆಂದೋಲನವನ್ನು ಬ್ಯಾಂಕಿನವರು ಕೈಕೊಳ್ಳಬಹುದು. ಪ್ರಗತಿಯ ಚಿತ್ರ ಆಶಾದಾಯಕ ವಿದೆ.



# ಅನುಪಾತ ವಿಶ್ಲೇಷಣೆ

ಮೋ. ಕೃ. ಅನಂತಸ್ವಾಮಿ
ಕೈಗಾರಿಕಾ ಹಣಕಾಸು ಶಾಖೆ
ಭಾರತೀಯ ಸ್ಟೇಟ್ ಬ್ಯಾಂಕ್
ಬೆಂಗಳೂರು
ಮತ್ತು
ಜಿ. ಎನ್. ನರಸಿಂಹ ಮೂರ್ತಿ
ಭಾರತೀಯ ಸ್ಟೇಟ್ ಬ್ಯಾಂಕ್
ಬೆಂಗಳೂರು ನಗರ ಶಾಖೆ

ಬ್ಯಾಂಕರುಗಳಿಗೆ ತಾವು ಉದರಿ ಒದಗಿಸಿರುವ ಘಟಕದ ಹಣಕಾಸು ಸ್ಥಿತಿಯ ತಿಳಿವಳಿಕೆ ಸದಾ ಕಾಲಕ್ಕೂ ಅಗತ್ಯ. ಈ ತಿಳಿವಳಿಕೆಗೆ ಕೆಲವು ಮಾನಗಳು ಅಗತ್ಯ, ಕೆಲವು ಸಾಧನಗಳು ಅಗತ್ಯ. ಇಂತಹ ಸಾಧನಗಳ ಪೈಕಿ ಘಟಕದ ಹಣಕಾಸು ತಃಖ್ತೆಗಳು ಬಹು ಮುಖ್ಯವಾಗಿವೆ. ಹಣಕಾಸು ತಃಖ್ತೆಗಳು ಸಾಮಾನ್ಯವಾಗಿ ಆಢಾವೆ ಪತ್ರಿಕೆ, ವ್ಯಾಪಾರ ಖಾತೆ ಹಾಗೂ ಲಾಭ ನಷ್ಟ ಖಾತೆಗಳನ್ನು ಒಳಗೊಂಡಿರುತ್ತವೆ. ಈ ತಃಖ್ತೆಗಳಲ್ಲಿರುವ ಕೆಲವು ಅಂಶಗಳ ಅನುಪಾತಗಳನ್ನು ಗೊತ್ತುಮಾಡಿ, ಅವುಗಳಿಂದ ಘಟಕದ ಒಟ್ಟಾರೆ ಸ್ಥಿತಿಯ ಬಗ್ಗೆ ಕೆಲವು ತೀರ್ಮಾನಗಳಿಗೆ ಬರುವುದನ್ನೇ ಅನುಪಾತ ವಿಶ್ಲೇಷಣೆ ಎನ್ನಬಹುದು. ತನ್ನ ಹಿಂದಿನ ಅನುಭವದಿಂದ ಬ್ಯಾಂಕರನು ಈ ಸಾಧನವನ್ನು ಹೊಸ ಘಟಕಕ್ಕೆ ಸಂಬಂಧಿಸಿದಂತೆ ಉದರಿ ನಿರ್ಧಾರಣೆಗೂ ಉಪಯೋಗಿಸಬಹುದು. ಅನುಪಾತ ವಿಶ್ಲೇಷಣೆಗೆ ಆವಶ್ಯಕವಾಗಿ ಬೇಕಾದ ಆಢಾವೆ ಪತ್ರಿಕೆ, ವ್ಯಾಪಾರ ಖಾತೆ ಹಾಗೂ ಲಾಭ ನಷ್ಟ ಖಾತೆಗಳನ್ನು ಸರಳವಾಗಿ ಹೀಗೆ ನಿರೂಪಿಸಬಹುದು :

[ಇವನ್ನು ಮುಂದಿನ ಅಂಕಣದಲ್ಲಿ ನೀಡಲಾಗಿದೆ]

ಈ ತಃಖ್ತೆಗಳಿಗೆ ಸಂಬಂಧಿಸಿದಂತೆ ಕೆಲವು ನಿರ್ದಿಷ್ಟ ಅನುಪಾತಗಳನ್ನು ಹೀಗೆ ವಿಂಗಡಿಸಲಾಗಿದೆ :

(೧) ದ್ರವತ್ವ ಅನುಪಾತಗಳು
(೨) ಲಾಭಪ್ರದತೆ ಅನುಪಾತಗಳು
(೩) ಬಂಡವಾಳಾಧಾರಿತ ಅನುಪಾತಗಳು
(೪) ಇತರ ಅನುಪಾತಗಳು

**ಆಢಾವೆ ಪತ್ರಿಕೆ :** [ಯಾವುದೇ ಒಂದು ನಿರ್ದಿಷ್ಟ ದಿನಾಂಕದಂದು]

| ಹೊಣೆ | ಆಸ್ತಿ |
|---|---|
| ಬಂಡವಾಳ | ಅಮೂರ್ತ ಆಸ್ತಿಗಳು |
| ಹಾಗೂ | |
| ಮೀಸಲುಗಳು | ಇತರ ಆಸ್ತಿಗಳು |
| ಅವಧಿ ಹೊಣೆಗಳು | ಸ್ಥಿರಾಸ್ತಿಗಳು |
| | (ಅ) ಸ್ಥಾವರ |
| | (ಆ) ಜಂಗಮ |
| ಚಾಲ್ತಿ ಹೊಣೆಗಳು | ಚಾಲ್ತಿ ಆಸ್ತಿಗಳು |
| *ಒಟ್ಟು | ಒಟ್ಟು |

*ಇದು ನಿಖರವಾಗಿ ತಾಳೆಯಾಗಬೇಕು.

**ವ್ಯಾಪಾರ ಖಾತೆ**

| ವೆಚ್ಚಗಳು | ಆದಾಯ |
|---|---|
| ಕಚ್ಚಾ ಸರಕಿಗಾಗಿ | ಮಾರಾಟದಿಂದ |
| ಇಂಧನ ಹಾಗೂ | ಇತರ |
| ವಿದ್ಯುತ್ತಿಗಾಗಿ | |
| ಉತ್ಪಾದಿತಾವೆಚ್ಚ | |
| ಸ್ಥೂಲ ಲಾಭ | |
| ಒಟ್ಟು | ಒಟ್ಟು |

**ಲಾಭನಷ್ಟ ಖಾತೆ**

| | |
|---|---|
| (೧) ಸಾಗಣೆ ವೆಚ್ಚ | ಸ್ಥೂಲ ಲಾಭ |
| (೨) ಲಾಭಾಂಶ ಪಾವತಿ | |
| ತೆರಿಗೆಗಳು | |
| ನಿವ್ವಳ ಲಾಭ | |
| ಒಟ್ಟು | ಒಟ್ಟು |

ಈ ವಿಂಗಡಣೆ ಅಗತ್ಯಕ್ಕೆ ತಕ್ಕಂತೆ ಇನ್ನಷ್ಟು ಬಗೆಯಲ್ಲಾಗಬಹುದು. ಇದೇ ಕೊನೆ ಎಂದೇನೂ ಅಲ್ಲ. ಈ ಅನುಪಾತಗಳು ಸೂಚಿಸತಕ್ಕ ಸಂಗತಿಗಳೇನೆಂದು ಒಂದೊಂದಾಗಿ ನೋಡಬಹುದು.

## ದ್ರವತ್ವ ಅನುಪಾತಗಳು

ಚಾಲ್ತಿ ಅನುಪಾತ, ಕ್ಷಿಪ್ರ ಅನುಪಾತಗಳು ಮುಖ್ಯ ದ್ರವತ್ವ ಅನುಪಾತಗಳು.

ಚಾಲ್ತಿ ಅನುಪಾತ: ಚಾಲ್ತಿ ಆಸ್ತಿ ಮತ್ತು ಚಾಲ್ತಿ ಹೊಣೆಗಳ ಅನುಪಾತವೇ ಚಾಲ್ತಿಅನುಪಾತ.ಆಢಾವೆ ಪತ್ರಿಕೆಯಲ್ಲಿ ಕಂಡುಬರುವ ನಗದು, ಅಲ್ಪಾವಧಿಯಲ್ಲಿ ನಗದೀಕರಿಸಬಹುದಾದ ವಿನಿಯೋಜನೆಗಳು, ವಿವಿಧ ಖಾತಾ ಪ್ರಾಪ್ಯಗಳು ಹಾಗೂ ತಯಾರಿಕೆಯ ವಿವಿಧ ಹಂತಗಳಲ್ಲಿರುವುದನ್ನೂ ಸೇರಿಸಿದಂತೆ ಇರುವ ದಾಸ್ತಾನು ಮುಂತಾದವೆಲ್ಲ ಚಾಲ್ತಿ ಆಸ್ತಿಗಳೆಂದು ಪರಿಗಣಿತವಾಗಿವೆ. ಹಾಗೆಯೇ ಖಾತಾ ದೇಯಗಳು, ಅಲ್ಪಾವಧಿ ಬ್ಯಾಂಕ್ ಸಾಲಗಳು, ಮುಂದಿನ ಹನ್ನೆರಡು ತಿಂಗಳಲ್ಲಿ ಪಾವತಿಯಾಗಬೇಕಾದ ಅವಧಿ ಸಾಲದ ಕಂತುಗಳು, ನಗದುದರಿ, ಮೀರೆಲೆತ, ಶಾಸನಬದ್ಧ ಹೊಣೆಗಳು, ಗ್ರಾಹಕರಿಂದ ಪಡೆದ ಮುಂಗಡಗಳು, ಸಂಚಿತ ಖರ್ಚು ಇತ್ಯಾದಿಗಳು ಚಾಲ್ತಿ ಹೊಣೆಗಳೆಂದು ಪರಿಗಣಿತವಾಗಿವೆ.

ಚಾಲ್ತಿ ಅನುಪಾತವು ೧ಕ್ಕಿಂತ ಹೆಚ್ಚಿದ್ದರೆ ಚಾಲ್ತಿ ಹೊಣೆಗಳನ್ನು ಸೂಕ್ತ ಕಾಲದಲ್ಲಿ ಪಾವತಿ ಮಾಡಬಲ್ಲ ಸಾಮರ್ಥ್ಯ ಘಟಕಕ್ಕೆ ಇದೆ ಎಂದು ಭಾವಿಸಬಹುದು. ಆಕಸ್ಮಾತ್ ಈ ಅನುಪಾತ ೧ಕ್ಕಿಂತ ಕಡಿಮೆ ಇದ್ದರೆ, ಹೊಣೆಗಳನ್ನು ಪಾವತಿ ಮಾಡಲು ಘಟಕಕ್ಕೆ ದ್ರವತ್ವ ಕೊರತೆಯಿದ್ದು, ಅದು ತೊಂದರೆಯನ್ನು ಎದುರಿಸಬೇಕಾಗುತ್ತದೆ ಎಂಬ ಅಂಶ ಸೂಚಿತವಾಗುತ್ತದೆ.

ಹೀಗೆ ಈ ಅನುಪಾತ ಅಲ್ಪಾವಧಿ ಸಾಲಿಗನ ದೃಷ್ಟಿಯಿಂದ ಪ್ರಾಮುಖ್ಯ ಪಡೆದಿದೆ. ಯಾವುದೇ ಬ್ಯಾಂಕು ತಾನು ಮುಂಗಡ ನೀಡುವ ಘಟಕದ ಚಾಲ್ತಿ ಅನುಪಾತ ೧ಕ್ಕಿಂತ ಹೆಚ್ಚಿರಲಿ ಎಂದೇ

ಅಪೇಕ್ಷಿಸುತ್ತದೆ. ಎಂದರೆ ಘಟಕದ ದ್ರವತ್ವ ಅನುಕೂಲ ಸ್ಥಿತಿಯಲ್ಲಿರಬೇಕು ಎಂದು ಅದು ಬಯಸುತ್ತದೆ.

**ಕ್ಷಿಪ್ರ ಅನುಪಾತ :** ಇದು ಚಾಲ್ತಿ ಅನುಪಾತದ ಅಂಶಗಳಲ್ಲಿ ಕೆಲವು ಬದಲಾವಣೆಗಳನ್ನು ಮಾಡಿದಾಗ ಬರುವ ಅನುಪಾತ. ಕ್ಷಿಪ್ರ ಆಸ್ತಿಗಳು [ನಗದು, ಅಲ್ಪಾವಧಿಯಲ್ಲಿ ನಗದೀಕರಿಸಬಹುದಾದ ವಿನಿಯೋಜನೆಗಳು ಹಾಗೂ ಪ್ರಾಪ್ಯಗಳು] ಹಾಗೂ ಚಾಲ್ತಿ ಹೊಣೆಗಳ ನಡುವಣ ಅನುಪಾತವೇ ಕ್ಷಿಪ್ರ ಅನುಪಾತ. ಇದು ಘಟಕದ ಹಣಕಾಸು ಸಾಮರ್ಥ್ಯದ ಉತ್ತಮತರ ಸೂಚಿ. ಇಲ್ಲಿ ಸರಕಿನ ದಾಸ್ತಾನುಗಳನ್ನು ಗಣಿಸುವುದಿಲ್ಲ. ಇದು ಘಟಕದ ಆಸ್ತಿಗಳ ತತ್‌ಕ್ಷಣದ ನಗದೀಕರಣ ಸಾಮರ್ಥ್ಯವನ್ನು ಬಿಂಬಿಸುತ್ತದೆ.

ಇಲ್ಲಿ ಗಮನಿಸಬೇಕಾದ ಸಂಗತಿ ಎಂದರೆ ಪ್ರಾಪ್ಯಗಳು ಸಕಾಲದಲ್ಲಿ ಪಾವತಿಯಾಗದಿರುವ ಸಾಧ್ಯತೆಯೂ ಇದೆ ಎಂಬುದೇ ಆಗಿದೆ.

## ಲಾಭಪ್ರದತೆ ಅನುಪಾತಗಳು

ನಿವ್ವಳ ಲಾಭ/ ಬಿಕರಿ ಅಥವಾ ನಿವ್ವಳ ಲಾಭಾನುಪಾತ, ಪರಿಚಲನಾ ಲಾಭ/ಬಿಕರಿ ನಿವ್ವಳ ಲಾಭ/ನಿವ್ವಳ–ಸಂಪತ್ತಿ (ಮೂರ್ತ), ಬಡ್ಡಿ ಮತ್ತು ತೆರಿಗೆ ಪಾವತಿಗೆ ಮುಂಚಿನ ವರಮಾನ/ತೊಡಗಿಸಿದ ಬಂಡವಾಳ ಮುಂತಾದವು ಲಾಭಪ್ರದತೆ ಅನುಪಾತಗಳು.

**ನಿವ್ವಳ ಲಾಭ/ಬಿಕರಿ :** ತೆರಿಗೆಯ ಅನಂತರದ ಲಾಭವನ್ನು ಆ ಅವಧಿಯ ಬಿಕರಿಯಿಂದ ಭಾಗಿಸಿದಾಗ ಬರುವ ಈ ಅನುಪಾತದ ಶೇಕಡಾ ರೂಪದಿಂದ ಬಿಕರಿಯ ಪ್ರತಿ ರೂ.ಗೆ ಬರುವ ನಿವ್ವಳ ಲಾಭವನ್ನು ಅಳೆಯಬಹುದು. ಘಟಕದ ಕಾರ್ಯದಕ್ಷತೆ, ಮುಂದಿನ ದಿನಗಳಲ್ಲಿ ಘಟಕ ಹಿಡಿಯಬಹುದಾದ ಹಾದಿ ಮುಂತಾದವನ್ನು ಈ ಅನುಪಾತ ಸೂಕ್ಷ್ಮವಾಗಿ ಸೂಚಿಸುತ್ತದೆ. ಜತೆಗೆ ಘಟಕದ ಈ ಅನುಪಾತವನ್ನು ಇಂತಹುದೇ ಚಟುವಟಿಕೆಯಲ್ಲಿ ತೊಡಗಿರುವ ಇತರ ಘಟಕಗಳ ಇದೇ ಅನುಪಾತಕ್ಕೆ ಹೋಲಿಸಿ, ಘಟಕದ ಸಾಮರ್ಥ್ಯವನ್ನು ತುಲನಾತ್ಮಕವಾಗಿ ಅಭ್ಯಸಿಸಲು ಸಹ ಬಳಸಬಹುದು.

**ಪರಿಚಾಲನಾ ಲಾಭ/ಬಿಕರಿ :** ಬಡ್ಡಿ ಮತ್ತು ತೆರಿಗೆಗಳನ್ನು ಪಾವತಿ ಮಾಡುವ ಮುನ್ನಿನ ವರಮಾನವೇ ಪರಿಚಾಲನಾ ಲಾಭ. ಈ ಅನುಪಾತವು ಘಟಕದ ಪರಿಚಾಲನಾ ದಕ್ಷತೆಯನ್ನು (Operating efficiency) ಬಿಂಬಿಸುತ್ತದೆ. ಇದೂ ಸಮಾನ ಚಟುವಟಿಕೆಯ ಘಟಕಗಳ ದಕ್ಷತೆಯನ್ನು ಸಾಪೇಕ್ಷವಾಗಿ ಅಭ್ಯಸಿಸಲು ಅನುಕೂಲ ಸಾಧನವಾಗಿದೆ.

**ಪರಿಚಾಲನಾ ಲಾಭ/ತೊಡಗಿಸಿದ ಬಂಡವಾಳ ಹಾಗೂ ನಿವ್ವಳ ಲಾಭ/ನಿವ್ವಳ ಸಂಪತ್ತಿ(ಮೂರ್ತ):** ಈ ಅನುಪಾತಗಳು ಬಂಡವಾಳವನ್ನು ಲಾಭಪ್ರದವಾಗಿ ತೊಡಗಿಸಲಾಗಿದೆಯೇ ಎಂಬುದನ್ನು ಹಾಗೂ ಷೇರುದಾರರ ದೃಷ್ಟಿಯಿಂದ, ನಿವ್ವಳ ಸಂಪತ್ತಿಯ (ಮೂರ್ತ) ಲಾಭಪ್ರದತೆ ಎಷ್ಟು ಎನ್ನುವುದನ್ನು ಬಿಂಬಿಸುತ್ತವೆ. ಬ್ಯಾಂಕರನಿಗೆ ಎರಡನೆಯದು ಅಷ್ಟೊಂದು ಮುಖ್ಯವಲ್ಲದಿದ್ದರೂ, ಗಮನಿಸಬೇಕಾಗುತ್ತದೆ.

## ಬಂಡವಾಳ ಆಧಾರಿತ ಅನುಪಾತಗಳು

ಋಣ/ಬಂಡವಾಳ ಋಣ ಬಂಡವಾಳ ಅನುಪಾತ, ಬಂಡವಾಳ + ಋಣ/ಸ್ಥಿರ ಮತ್ತು ಇತರ ಚಾಲ್ತೀತರ ಆಸ್ತಿಗಳು ಇವು ಬಂಡವಾಳ ಅನುಪಾತಗಳು.

ಇಲ್ಲಿ ಋಣವೆಂದರೆ ದೀರ್ಘಾವಧಿ ಋಣ. ಬಂಡವಾಳವೆಂದರೆ ಮೂಲ (ಷೇರು) ಬಂಡವಾಳ, ಮೀಸಲು ಹಾಗೂ ನಿಧಿ ಹೆಚ್ಚಳಗಳೂ ಸೇರಿರುತ್ತವೆ.

## ಋಣ ಬಂಡವಾಳ ಅನುಪಾತ

ಮಧ್ಯಮ ಹಾಗೂ ದೊಡ್ಡ ಪ್ರಮಾಣದ ಕೈಗಾರಿಕೆಗಳಲ್ಲಿ ಈ ಅನುಪಾತ ೨:೧ರಂತೆ ಇರಬೇಕೆಂದು ಬ್ಯಾಂಕರರು ಬಯಸುತ್ತಾರೆ. ಎಂದರೆ ಘಟಕದ ಪಾಲು ಸಾಕಷ್ಟಿರಬೇಕು ಎಂಬುದೇ ಇದರ ಅರ್ಥವಾಗಿದೆ.

ಸಣ್ಣ ಕೈಗಾರಿಕೆಗಳಿಗೆ ಇದು ೮:೧ರತನಕ ಇರಬಹುದಾಗಿದೆ.

**ಬಂಡವಾಳ + ಋಣ/ಸ್ಥಿರ ಮತ್ತು ಇತರ ಚಾಲ್ತೀತರ ಆಸ್ತಿಗಳು :** ಈ ಅನುಪಾತವನ್ನು ಘಟಕವು ಸ್ಥಿರ ಮತ್ತು ಇತರ ಚಾಲ್ತೀತರ ಆಸ್ತಿಗಳಿಗೆ ವಿನಿಯೋಜಿಸಿದ ನಂತರ ದೀರ್ಘಾವಧಿ ಮೂಲಗಳಿಂದ ಎಷ್ಟು ನಿಧಿಯನ್ನು ಹೊಂದಿಸಲು ಸಾಧ್ಯ ಎಂಬುದನ್ನರಿಯಲು ಬಳಸಲಾಗುವುದು. ಇದು ಎಷ್ಟಿದ್ದರೂ ಉತ್ತಮ. ಏಕೆಂದರೆ ಘಟಕವು ತಕ್ಕ ಪ್ರಮಾಣದಲ್ಲಿ ತನ್ನ ನಾಶಿಯನ್ನು ತಂದಿದೆಯೇ ಇಲ್ಲವೇ ಎಂಬುದು ಇದರಿಂದ ತಿಳಿಯುತ್ತದೆ. ಎಲ್ಲ ಬ್ಯಾಂಕರರಿಗೂ ಇದನ್ನು ಖಚಿತಪಡಿಸಿಕೊಳ್ಳುವುದು ಅಗತ್ಯವಾಗಿರುತ್ತದೆ.

## ಇತರ ಅನುಪಾತಗಳು

ಮೇಲಿನ ಅನುಪಾತಗಳ ಜತೆಗೆ ಇನ್ನೂ ಕೆಲವು ಅನುಪಾತಗಳು ಘಟಕದ ಬಗೆಗೆ ಇನ್ನಷ್ಟು ಬೆಳಕು ಚೆಲ್ಲುತ್ತವೆ. ಅವನ್ನೂ ಸಹ ಪರಿಗಣಿಸುವುದು ಬ್ಯಾಂಕರನಿಗೆ ಸಹಾಯಕವಾಗುವುದು.

**ಋಣ ಪಾವತಿ ಅನುಪಾತ :** ನಿವ್ವಳ ನಗದು ಸಂಚಯ ÷ ಒಟ್ಟಾರೆ ಮರುಪಾವತಿ. ಇದು, ದೀರ್ಘಾವಧಿ ಋಣಗಳ ಕಂತುಗಳನ್ನು ಸಕಾಲದಲ್ಲಿ ಪಾವತಿ ಮಾಡಬಲ್ಲ ಸಾಮರ್ಥ್ಯ ಘಟಕಕ್ಕೆ ಇದೆಯೇ ಎಂಬುದನ್ನು ಸೂಚಿಸುತ್ತದೆ. ಇದು ೧ : ೧ ಇದ್ದಾಗ ಮರುಪಾವತಿ ಖಾತರಿ ಎನಿಸಿದರೂ, ದೀರ್ಘಾವಧಿ ಸಾಲದ ಪಾವತಿ ಆಗಬೇಕಾಗಿರುವುದರಿಂದ, ಅನುಪಾತ ೧ : ೧.೫ ಇದ್ದರೆ ಪಾಸ್ ಎಂದು ಬ್ಯಾಂಕರರು ಅಭಿಪ್ರಾಯಪಟ್ಟಿದ್ದಾರೆ. ಏಕೆಂದರೆ ಘಟಕದ ಯಾವುದೇ ಚಲಗಳಲ್ಲಿ (Variable) ಸ್ವಲ್ಪ ವ್ಯತ್ಯಾಸವಾದರೂ ಪಾವತಿ ಸಾಮರ್ಥ್ಯಕ್ಕೆ ಧಕ್ಕೆ ಒದಗಬಹುದು. ಕೇವಲ ಅವಧಿ ಸಾಲಗಳನ್ನು ನೀಡುವಾಗಲಂತೂ ಇದನ್ನು ಗಮನಿಸುವುದು ಅನಿವಾರ್ಯವಾಗಿರುತ್ತದೆ.

**ಬಡ್ಡಿ ಪಾವತಿ ವ್ಯಾಪ್ತಿ ಅನುಪಾತ :** ಬಡ್ಡಿ ಮತ್ತು ತೆರಿಗೆ ಪಾವತಿಗೆ ಮುಂಚಿನ ವರಮಾನ÷ ದೀರ್ಘಾವಧಿ ಋಣದ ಬಡ್ಡಿ. ಇದು ಬಡ್ಡಿ ಮತ್ತು ಅಧಿಮಾನ ಷೇರುಗಳಿಗೆ ನೀಡಬೇಕಾದ ಲಾಭಾಂಶ ಪಾವತಿಗೆ ಘಟಕ ಸಮರ್ಥವಾಗಿದೆ ಎಂಬುದನ್ನು ಸೂಚಿಸುತ್ತದೆ.

**ನಿವ್ವಳ ವಿಕ್ರಯ/ನಿವ್ವಳ ಮೂರ್ತ ಆಸ್ತಿಗಳು :** ಇದು ಜಾಸ್ತಿ ಇದ್ದಲ್ಲಿ ಘಟಕವು ತನ್ನ ನಿವ್ವಳ ಮೂರ್ತ ಸಂಪತ್ತನ್ನು ಸಮರ್ಥವಾದ ರೀತಿಯಲ್ಲಿ ಬಳಸುತ್ತಿದೆ ಎಂದು ಭಾವಿಸಬಹುದು. ಆಕಸ್ಮಾತ್ ಇದು ಕಡಿಮೆ ಇದ್ದಲ್ಲಿ ಘಟಕವು ಸ್ಥಿರ ಆಸ್ತಿಗಳನ್ನು ಹೊಂದಲು ಹೆಚ್ಚು ಪ್ರಮಾಣದಲ್ಲಿ ಹಣ ತೊಡಗಿಸಿದೆ ಎಂದಾಗಿ, ಇದು ಎಷ್ಟರಮಟ್ಟಿಗೆ ಆವಶ್ಯಕ ಎಂಬ ಪ್ರಶ್ನೆಯನ್ನು ಮೂಡಿಸುತ್ತದೆ.

**ನಿವ್ವಳ ಚಾಲ್ತಿ ಬಂಡವಾಳ ಆಸ್ತಿಗಳ ಆವರ್ತನ :** ಇದು ದುಡಿಯುವ ಬಂಡವಾಳ ಸಮರ್ಪಕ ಬಳಕೆಗೆ ಒಂದು ಅಳತೆಗೋಲಾಗಿರುತ್ತದೆ. ಎಂದರೆ, ನಿವ್ವಳ ಬಿಕರಿಯನ್ನು ಸರಾಸರಿ ನಿವ್ವಳ ಚಾಲ್ತಿ ಆಸ್ತಿಗಳಿಂದ ಭಾಗಿಸಿದಾಗ ಈ ಅನುಪಾತ ದೊರೆತು ಪರಿಚಾಲನಾ ದಕ್ಷತೆ ಹಾಗೂ ದುಡಿಯುವ ಬಂಡವಾಳ ಬಳಕೆಯಾಗಿರುವ ಪರಿಯನ್ನು ಸೂಚಿಸುತ್ತದೆ.

ಈ ಅನುಪಾತ ಹೆಚ್ಚಿದ್ದಷ್ಟೂ, ಘಟಕದ ದಕ್ಷತೆ ಅಷ್ಟರಮಟ್ಟಿಗೆ ಉತ್ತಮ ಎಂದೇ ಹೇಳಬಹುದು. ಆದರೆ ಒಂದು ಅಂಶವನ್ನು ಗಮನಿಸಬೇಕು. ಘಟಕಕ್ಕೆ ಬಂಡವಾಳದ ಕೊರತೆ ಇದ್ದಾಗ ಸಹ ಈ ಅನುಪಾತ ಅತ್ಯಧಿಕವಾಗಿ ಕಂಡುಬರುತ್ತದೆ. ಆದ್ದರಿಂದ ಈ ಅನುಪಾತದ ಜತೆಗೆ ಘಟಕದ ಬಂಡವಾಳವನ್ನೂ ದೃಷ್ಟಿಯಲ್ಲಿರಿಸಿಕೊಳ್ಳಬೇಕು.

**ವಸೂಲಿ ಅವಧಿ–ಪ್ರಾಪ್ಯಾವರ್ತ ಅನುಪಾತ :** ಒಂದು ನಿರ್ದಿಷ್ಟ ಅವಧಿಯಲ್ಲಿ ಉದರಿ ವಿಕ್ರಯಗಳಿಗೂ, ಸರಾಸರಿ ಪ್ರಾಪ್ಯಗಳಿಗೂ ಇರುವ ಸಂಬಂಧವನ್ನು ಈ ಅನುಪಾತ ವ್ಯಕ್ತಪಡಿಸುತ್ತದೆ.

ಸರಾಸರಿ ವಸೂಲಾತಿ ಅವಧಿಯು ಘಟಕದ ಒಟ್ಟಾರೆ ಕಾರ್ಯಾಚರಣೆಯ ಗುಣಮಟ್ಟ ಹಾಗೂ ಅದರ ಉದರಿ ನೀತಿಗಳ ಒಂದು ಪರಿಚಯವನ್ನು ನೀಡುತ್ತದೆ.

## ಸರಕು ದಾಸ್ತಾನು ಆವರ್ತನ ಅನುಪಾತ

ದಾಸ್ತಾನು ಮತ್ತು ವಿಕ್ರಯಗಳ ನಡುವಣ ಸಂಬಂಧವನ್ನು ಈ ಎರಡು ರೀತಿಗಳಲ್ಲಿ ಪ್ರಸ್ತುತಪಡಿಸ

ಬಹುದು.

(೧) ವಿಕ್ರಯಗಳು/ಅಂತಿಮ ದಾಸ್ತಾನು. (೨) ಮಾರಿದ ಸರಕುಗಳ ವೆಚ್ಚ/ಸರಾಸರಿ ದಾಸ್ತಾನು. ವಿಕ್ರಯ ದಾಸ್ತಾನು ಅನುಪಾತಕ್ಕೆ ಎರಡು ಗಮನಿಸಬೇಕಾದ ಮಿತಿಗಳಿವೆ. ಮೊದಲನೆಯದೆಂದರೆ, ಇಲ್ಲಿ ಕಂಡುಬರುವ ಅಂತಿಮ ದಾಸ್ತಾನಿನ ವರ್ಷಪೂರ್ತಿಯ ದಾಸ್ತಾನಿನ ಮಟ್ಟವನ್ನು ಸೂಚಿಸದಿರಬಹುದು. ಎರಡನೆಯದೆಂದರೆ ದಾಸ್ತಾನಿನ ಮೇಲಿನ ವಿನಿಯೋಜನೆಯನ್ನು ಮಾರಿದ ಸರಕುಗಳ ವೆಚ್ಚಕ್ಕೆ ಹೋಲಿಸಬೇಕೇ ವಿನಾ ವೆಚ್ಚದ ಜತೆಗೆ ಲಾಭದ ಅಂಶವಿರುವ ವಿಕ್ರಯಗಳಲ್ಲ.

ಮಾರಾಟವೆಚ್ಚ/ಸರಾಸರಿದಾಸ್ತಾನು ಅನುಪಾತವು ಸರಾಸರಿ ದಾಸ್ತಾನು ಹೇಗೆ ಆವರ್ತನವಾಗುತ್ತಿದೆ ಎಂಬುದನ್ನು ಸೂಚಿಸುತ್ತದೆ. ಇದು ಹೆಚ್ಚಿದಷ್ಟೂ ಘಟಕಕ್ಕೆ ಲಾಭವು ಅಧಿಕವಾಗಿರುತ್ತದೆ ಹಾಗೂ ಇಂತಹ ಘಟಕವು ದಾಸ್ತಾನಿನ ಮೇಲೆ ಕಡಿಮೆ ಬಂಡವಾಳವನ್ನು ತೊಡಗಿಸಿರುತ್ತದೆ. ಈ ಅನುಪಾತವು ಘಟಕದ ಮಾರಾಟ ದಕ್ಷತೆ ಹಾಗೂ ಉತ್ಪನ್ನದ ಗುಣಮಟ್ಟಗಳಿಗೆ ಒಂದು ಅಳತೆಗೋಲಾಗಿರುತ್ತದೆ.

ಹೀಗೆ ಇಷ್ಟೆಲ್ಲ ಅನುಪಾತಗಳನ್ನು ಬ್ಯಾಂಕರನು ತನ್ನ ಉದರಿ ನಿರ್ಧಾರಣದಲ್ಲಿ ಬಳಸಿಕೊಳ್ಳಬೇಕಾಗುತ್ತದೆ. ಇವಲ್ಲದೆ ಇನ್ನೂ ಅನೇಕ ಅನುಪಾತಗಳನ್ನು ನಿರ್ದಿಷ್ಟ ಕೈಗಾರಿಕೆ, ನಿರ್ದಿಷ್ಟ ಸ್ಥಳ, ನಿರ್ದಿಷ್ಟ ಸಮಯಗಳಲ್ಲಿ ಗಮನಿಸಬೇಕಾಗುತ್ತದೆ. ಇಷ್ಟೆಲ್ಲ ಅನುಪಾತಗಳನ್ನು ಗಮನಿಸಿದರೂ, ಅವುಗಳನ್ನಾಧರಿಸಿ ತೆಗೆದುಕೊಂಡ ತೀರ್ಮಾನಗಳು ತುಂಬ ಸಮಂಜಸವಾಗಿರುತ್ತವೆ ಎಂದೇನೂ ಅಲ್ಲ. ಹೆಚ್ಚೆಂದರೆ ಇವು ಘಟಕದ ಸದ್ಯದ ಸ್ಥಿತಿಯ ಒಂದು ಸ್ಥೂಲ ಚಿತ್ರವನ್ನು ಮಾತ್ರ ಒದಗಿಸಬಲ್ಲವು. ಏಕೆಂದರೆ ಈ ಅನುಪಾತಗಳ ಘಟಕವು ನೀಡುವ ಹಣಕಾಸು ತಃಖ್ತೆಗಳಿಂದ ಮೂಡಿ ಬಂದಿದ್ದು, ಹಣಕಾಸು ತಃಖ್ತೆಗಳ ವಿಶ್ಲೇಷಣೆಗೆ ಅನೇಕ ಮಿತಿಗಳಿವೆ. ತುಂಬ ಮುಖ್ಯವಾಗಿ ಈ ಕೆಳಗಿನವುಗಳನ್ನು ಗಮನಿಸಬೇಕು.

ಹಣಕಾಸು ತಃಖ್ತೆಗಳು (ಅಥಾವೆ ಪತ್ರಿಕೆ) ಯಾವುದೋ ಒಂದು ದಿನದ ಹಣಕಾಸು ಸ್ಥಿತಿಯನ್ನು ಮಾತ್ರ ಬಿಂಬಿಸುತ್ತದೆ.

(೨) ಹಣಕಾಸು ತಃಖ್ತೆಗಳು ಆಸ್ತಿಗಳನ್ನು ಮೊಬಲಗುಗಳ ಮೂಲಕ ಸೂಚಿಸಿದರೂ, ಅವುಗಳ ನೈಜ ಮೌಲ್ಯ ಇವುಗಳಿಂದ ತಿಳಿದುಬರುವುದಿಲ್ಲ. ಉದಾಹರಣೆಗೆ, ಇಲ್ಲಿ ಕಂಡುಬರುವ ದಾಸ್ತಾನು ಮಾರಾಟ ಯೋಗ್ಯವಲ್ಲದೇ ಇರಬಹುದು, ಪ್ರಾಪ್ಯಗಳು ವಸೂಲಿ ಯೋಗ್ಯವಲ್ಲದೆ ಇರಬಹುದು.

(೩) ಇದು ಒಂದು ದಿನದ ಸ್ಥಿರ ಚಿತ್ರವಾದ್ದರಿಂದ, ಘಟಕವು ತನ್ನಲ್ಲಿರುವ ಕೊರತೆಗಳನ್ನು, ಹುಳುಕುಗಳನ್ನು ಮುಚ್ಚಲು ಹಣಕಾಸು ತಃಖ್ತೆಗಳಿಗೆ ಮೇಲ್ಮೆರುಗನ್ನು ನೀಡಿರಬಹುದು. ಹೀಗಾಗಿ, ಈ ಮಿತಿಗಳು ಹಣಕಾಸು ತಃಖ್ತೆಗಳಿಂದ ನಾವು ಗಣಿಸುವ ಅನುಪಾತಗಳಿಗೂ ಅನ್ವಯಿಸಿ ಅವು ಬ್ಯಾಂಕರನನ್ನು ತಪ್ಪು ತೀರ್ಮಾನಗಳಿಗೆ ದೂಡಬಹುದು. ಆದರೆ ಈ ಮಿತಿಗಳ ಹೊರತಾಗಿಯೂ ಅನುಪಾತ ವಿಶ್ಲೇಷಣೆ ಬ್ಯಾಂಕರನಿಗೆ ಘಟಕಗಳ ಹಣಕಾಸು ಸ್ಥಿತಿಯನ್ನರಿಯಲು ತುಂಬ ಉಪಯುಕ್ತ ಸಾಧನಗಳು ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಅವನ್ನು ಯುಕ್ತರೀತಿಯಲ್ಲಿ ಉಪಯೋಗಿಸಿಕೊಳ್ಳಬೇಕು ಅಷ್ಟೆ.



# ಸಾಧನಾ ನಿರ್ವಹಣೆ: ವೈಯಕ್ತಿಕ ಸಾಧನೆ

ಮೂಲ : ಶಾರೂ ರಂಗಣೇಕರ್

ಅನುವಾದ :

ಎಸ್. ಸೀತಾರಾಮು

ಪ್ರಭಾರಿ ಅಧಿಕಾರಿ, ತಾಂತ್ರಿಕ ಸಲಹಾ ಕೋಶ
ಸಣ್ಣ ಕೈಗಾರಿಕೆ ಹಾಗೂ ವ್ಯಾಪಾರ ವಿಭಾಗ
ಭಾರತೀಯ ಸ್ಟೇಟ್ ಬ್ಯಾಂಕ್
ಸ್ಥಳೀಯ ಪ್ರಧಾನ ಕಛೇರಿ, ಬೆಂಗಳೂರು

ನಿಮಗೆ ತಿಳಿದಂತೆ ನಾನು ಮಾತನಾಡಬೇಕಾಗಿರುವ ವಿಷಯ ಸಾಧನಾ ನಿರ್ವಹಣೆ. ಇಂದು ಬೆಳಗ್ಗೆ ಸ್ವಯಂ ನಿರ್ವಹಣೆಯ (Self Management) ಬಗೆಗಿನ ಚರ್ಚೆಯನ್ನು ನಾನು ಬಹಳ ಜಾಗರೂಕನಾಗಿ ಕೇಳುತ್ತಿದ್ದೆ. ರೆಡ್‌ಹಿಲ್ ಹೇಳಿರುವಂತೆ ಅಂತಿಮ ವಿಶ್ಲೇಷಣೆಯಲ್ಲಿ ನಿರ್ವಹಣೆ ಎಂದರೆ ಕೇವಲ ಜನನಿರ್ವಹಣೆ. ಜನನಿರ್ವಹಣೆ ಎಂದರೆ ಸ್ವಯಂನಿರ್ವಹಣೆ. ಆ ಅರ್ಥದಲ್ಲಿ ಇದುವರೆವಿಗೂ ನಮ್ಮ ಮುಂದಿಟ್ಟ ವಿಷಯಗಳು ಸ್ವಯಂ ನಿರ್ವಹಣೆಗಳಲ್ಲದೆ, ಸಾಧನಾ ನಿರ್ವಹಣೆಗೂ ಬಹಳ ಮುಖ್ಯವಾದಂತಹವು. ಸಾಧನಾ ನಿರ್ವಹಣೆಯೆಂದರೆ ಒಂದು ಕರಾರಿನಂತೆ ನಿಮಗೆ ಸಾಧನೆಯನ್ನು ಕೊಡಲು ಇತರರನ್ನು ನಿರ್ವಹಿಸುವುದು. ಆದರೆ ಸ್ವಯಂ ನಿರ್ವಹಣೆಯ ಬಗ್ಗೆ ಹೇಳಿದ ಮಾತುಗಳನ್ನು ಕೇಳಿ ನನಗನ್ನಿಸಿದ್ದೇನೆಂದರೆ ನಿಜವಾಗಿಯೂ ಯಾರು ಅಂಥ ಸ್ವಯಂನಿರ್ವಹಣೆಯಲ್ಲಿ ತೊಡಗಿದ್ದಾರೆ ಎಂದು. ಈಗ ಹೇಳಿದ ವಿಷಯಗಳು ಏನಾಗಬೇಕು ಎಂಬಂತಹವು. ನಾವು ಮೂರು ವಿಧವಾಗಿ ಯೋಚಿಸಬಹುದು: ಏನಾಗಬಹುದು, ಏನಾಗುತ್ತದೆ, ಏನಾಗಬೇಕೆಂದು. ಏನಾಗಬೇಕೆಂಬುದರ ಬಗ್ಗೆ ತತ್ವಜ್ಞಾನಿಗಳು ಚಿಂತಿಸುತ್ತಾರೆ. ರಾಜಕಾರಣಿಗಳು ಏನಾಗಬಹುದು ಎಂಬುದನ್ನು ಸ್ವಪ್ರಯೋಜನಕ್ಕಾಗಿ ಬಳಸಿಕೊಳ್ಳುತ್ತಾರೆ. ಮತ್ತೆ ವ್ಯವಸ್ಥಾಪಕರು ಏನಾಗುತ್ತದೆ ಎಂಬುದರ ಮೇಲೆ ಬೆಳಕು ಚೆಲ್ಲಬೇಕು. ನಾನು ಏನಾಗಬೇಕು ಎಂಬುದರ ಬದಲಾಗಿ ನಾವು ಮಾಡಲು ಸಾಧ್ಯ ಎಂಬುದರ ಬಗ್ಗೆ ಮಾತನಾಡುತ್ತೇನೆ. ಏಕೆಂದರೆ ಇದುವರೆಗಿನ ಭಾಷಣಗಳಲ್ಲಿ ಚಿತ್ರಿತವಾದಂತಹ ಸ್ವಯಂನಿರ್ವಹಣೆ ಮಾಡಬಲ್ಲಂಥ ವ್ಯಕ್ತಿಯನ್ನ ನಾನು ಇನ್ನೂ ಕಾಣಬೇಕಾಗಿದೆ.

ನಾನು ಕಂಡಂಥ ವ್ಯಕ್ತಿಗಳು ಸಾಧನೆಯನ್ನ ಸೃಷ್ಟಿಸಿದಂಥವರು. ಅವರಲ್ಲಿ ನಾನು ವಿಶೇಷವಾಗಿ ಆಸಕ್ತನಾಗಿದ್ದೇನೆ. ನನ್ನ 35 ವರ್ಷಗಳ ಅನುಭವದಲ್ಲಿ ಉಚ್ಚಸಾಧನೆ ಮಾಡುತ್ತಿರುವಂಥ ಯಾರೇ ಆಗಲಿ ನನ್ನ ಕಣ್ಣಿಗೆ ಬಿದ್ದಾಗ ನಾನು ಅವರನ್ನು ಎಷ್ಟು ಹತ್ತಿರದಿಂದ ಪರಿಶೀಲಿಸಲು ಸಾಧ್ಯವೋ ಅಷ್ಟು ಹತ್ತಿರದಿಂದ ಪರಿಶೀಲಿಸುತ್ತಾ ಬಂದಿದ್ದೇನೆ. ಅದೃಷ್ಟವಶಾತ್ ಕೆಲವು ವ್ಯಕ್ತಿಗಳನ್ನ ನಾನು ಈ ರೀತಿ ಪರಿಶೀಲಿಸಲು ಸಾಧ್ಯವಾಗಿದೆ. ಅವರಲ್ಲಿ ಕೆಲವರು ದುಲೀಪ್‌ಸಿಂಗ್‌ರಂತಹ ನನ್ನ ಮಿತ್ರರು. ಇನ್ನು ಕೆಲವರಲ್ಲಿ ವಿ. ಕೃಷ್ಣಮೂರ್ತಿ, ಪಿ.ಸಿ. ಲಾಲ್ ರಂತಹ ಪರಿಚಯಸ್ಥರು ಇದ್ದಾರೆ. ಅಂತಹ ವ್ಯಕ್ತಿಗಳನ್ನ ಪರಿಶೀಲಿಸಿದಾಗ ಸಾಧನಾ ನಿರ್ವಹಣೆಯಲ್ಲಿ ಒಂದು ನಿಶ್ಚಿತ ಮಾದರಿ (Pattern) ಇದೆ ಎಂಬುದನ್ನ ಕಂಡಿದ್ದೇನೆ.

ತಮ್ಮ ಸಂಸ್ಥೆಗಳಲ್ಲಿನ ಸಾಧನಾ ನಿರ್ವಹಣೆಯನ್ನ ಚೆನ್ನಾಗಿ ಮಾಡುವವರು ಕಡ್ಡಾಯವಾಗಿ ತಮ್ಮ ಸ್ವಂತ ಜೀವನವನ್ನ ಚೆನ್ನಾಗಿ ನಿರ್ವಹಿಸುತ್ತಾರೆ ಎಂಬುದೇನೂ ಇಲ್ಲ ಎನ್ನುವುದನ್ನೂ ಕಂಡುಕೊಂಡಿದ್ದೇನೆ. ಆದ್ದರಿಂದ ಸ್ವನಿರ್ವಹಣೆ ಎಂಬುದು ಯಾರು ತಮ್ಮನ್ನು ಒಬ್ಬ ಒಳ್ಳೆಯ ನಿರ್ವಾಹಕ, ಒಳ್ಳೆಯ ಮನುಷ್ಯ, ಒಳ್ಳೆಯಗಂಡ, ಒಳ್ಳೆಯ ತಂದೆ ಇತ್ಯಾದಿಯಾಗಿ ಕಾಣಬಯಸುತ್ತಾರೋ ಅಂತಹವರಿಗೆ ಸರಿ ಎನಿಸುತ್ತದೆ. ಆದರೆ ನಾನು ಕಂಡಂಥ ಸಾಧಕರು ಆ ದರ್ಜೆಯವರಲ್ಲ. ಗಾಂಧೀಜಿಯವರು ಅಂತಹ ಒಬ್ಬ ಶ್ರೇಷ್ಠ ಸಾಧಕ. ಮತ್ತೆ ಅವರ ಸಾಂಸಾರಿಕ ಜೀವನ ಹೇಗಿತ್ತೆಂಬುದು ನಮಗೆಲ್ಲಾ ತಿಳಿದ ವಿಷಯ. ಆದ್ದರಿಂದ ಸ್ವನಿರ್ವಹಣೆ ಎಂದರೆ ಜೀವನದ ಎಲ್ಲ ಕ್ಷೇತ್ರಗಳಲ್ಲೂ ಶ್ರೇಷ್ಠ ನಿರ್ವಹಣೆ ಎಂದೇನೂ ಇಲ್ಲ. ಅಥವಾ ಸಿದ್ಧ ನಿರ್ವಾಹಕರು ಅಕ್ಷರಶಃ ಉತ್ತಮ ಎಂದೂ ಅಲ್ಲ. ಪರಿಪೂರ್ಣತೆ ಎನ್ನುವಂತಹದೇನೂ ಇಲ್ಲ. ಸಾಧನೆಗೆ ಪೂರಕ

[ಮುಂದಿನ ಪುಟ ನೋಡಿ

ವಾಗುವ ಅಂಶಗಳನ್ನು ನಾನು ಗುರುತಿಸಿದ್ದೇನೆ. ಯಾವುದೇ ಸಂಸ್ಥೆಯ ಸಾಧನೆ ಎರಡು ಅಂಶಗಳನ್ನು ಅವಲಂಬಿಸಿರುತ್ತದೆ: ಒಂದು ತಾಂತ್ರಿಕತೆ, ಮತ್ತೊಂದು ಮಾನವೀಯ ಸಂಬಂಧ.

## ತಾಂತ್ರಿಕತೆ ಮತ್ತು ಮಾನವೀಯ ಸಂಬಂಧ

ತಾಂತ್ರಿಕತೆ ಹೆಚ್ಚು ಕಡಿಮೆ ಒಂದು ಸಂಸ್ಥೆ ಮಾಡಬಹುದಾದ ವಿನಿಯೋಜನೆಗೆ ಸಂಬಂಧಪಟ್ಟಿದ್ದು. ಒಂದು ಕಂಪನಿ ಸರಿಯಾದ ತಾಂತ್ರಿಕತೆಯನ್ನ ಆರಿಸಿ, ಬೇಕಾದಷ್ಟು ಬಂಡವಾಳ ಹೂಡಿಸಿ, ಹೂಡಿದರೆ ಆ ಕಂಪನಿಯಲ್ಲಿ ಸಾಧನೆಯಿರುತ್ತದೆ. ಆದರೆ ಕೇವಲ ಉತ್ತಮ ತಾಂತ್ರಿಕತೆಯಿಂದಾಗಿ ಯಾವಾಗಲೂ ಉತ್ತಮ ಸಾಧನೆಯುಂಟಾಗುತ್ತದೆ ಎಂದೇನೂ ಇಲ್ಲ. ಇದೇ ಮದ್ರಾಸಿನಲ್ಲಿ ಬಿನ್ನಿ ಕಂಪನಿ ಸುಮಾರು ಹತ್ತು ವರ್ಷಗಳ ಹಿಂದೆ ನವೀನ ತಾಂತ್ರಿಕತೆ ಕೊಳ್ಳಲು ಬಹಳಷ್ಟು ಹಣ ಹೂಡಿತು. ಆದರೆ ಕೊನೆಯಲ್ಲಿ ವಿಫಲಗೊಂಡಿತು. ಪ್ರಪಂಚದಲ್ಲಿ ತಮ್ಮ ಉತ್ತಮ ಗುಣಮಟ್ಟಕ್ಕಾಗಿ ಹೆಸರುವಾಸಿಯಾಗಿದ್ದರೂ ವಿಫಲಗೊಂಡ ಎರಡು ಕಂಪನಿಗಳೆಂದರೆ ರೋಲ್ಸ್‌ರಾಯ್ಸ್ ಮತ್ತು ಬಿನ್ನಿ. ಮತ್ತೆ ಅವುಗಳ ಉದಾಹರಣೆಗಳು ಪರಿಶೀಲಿಸಲು ಯೋಗ್ಯವಾಗಿವೆ. ಇಲ್ಲಿ ಒಂದು ಕಂಪನಿ ತಾಂತ್ರಿಕತೆಯಲ್ಲಿ ಅಪಾರ ಹಣ ಹೂಡಿದರೂ, ಆ ತಾಂತ್ರಿಕತೆಯನ್ನು ಕಂಪನಿಯ ಸಾಧನೆಗಾಗಿ ಬಳಸಿಕೊಳ್ಳಲಾಗಲಿಲ್ಲ—ಕಾರಣ ಅಲ್ಲಿದ್ದಂತಹ ಕೆಟ್ಟ ಮಾನವೀಯ ಸಂಬಂಧ. ಬಿನ್ನಿಯಲ್ಲಾದಂತಹ ಪರಿಸ್ಥಿತಿ ಇನ್ನೂ ಬಹಳಷ್ಟು ಕಂಪನಿಗಳಲ್ಲಾಗಿದೆ.

ಇದು ನಾವು ಮಾನವೀಯ ಸಂಬಂಧದಿಂದ ಏನು ಮಾಡಬಹುದು ಎಂಬುದರ ಪ್ರಾಮುಖ್ಯವನ್ನು ಸೂಚಿಸುತ್ತದೆ. ಏಕೆಂದರೆ ತಾಂತ್ರಿಕತೆ ಸಾಮಾನ್ಯವಾಗಿ ಒಮ್ಮೆ ತೆಗೆದುಕೊಳ್ಳುವ ನಿರ್ಧಾರವನ್ನು ಅವಲಂಬಿಸಿರುತ್ತದೆ. ನೀವು ಎಲ್ಲ ಉತ್ತಮ ಸಲಹೆಗಳನ್ನು ಪರಿಗಣಿಸಿ, ಎಲ್ಲ ಪರಿಣತಿಯನ್ನು ಬಳಸಿಕೊಂಡು, ತಾಂತ್ರಿಕತೆಯ ಬಗ್ಗೆ ನಿರ್ಧಾರ ತೆಗೆದುಕೊಳ್ಳುತ್ತೀರಿ. ಆದರೆ ಒಮ್ಮೆ ನೀವು ಆ ನಿರ್ಧಾರ ತೆಗೆದುಕೊಂಡ ಅನಂತರ ಅದನ್ನ ಪ್ರತಿವರ್ಷ ಬದಲಾಯಿಸಲು ಸಾಧ್ಯವಿಲ್ಲ. ಆದರೆ ಮಾನವಸಂಬಂಧಗಳ ಬಗ್ಗೆ ನಾವು ಪ್ರತಿ ದಿವಸ ಕಾಳಜಿ ವಹಿಸಬೇಕು. ಈ ಸಂಬಂಧಗಳನ್ನು ನಾವು ಒಮ್ಮೆ ಸರಿಮಾಡಿದ್ದೇವೆ, ನಿರ್ವಹಿಸಿದ್ದೇವೆ ಎಂದು ಹೇಳಿ ಸುಮ್ಮನೆ ಕುಳಿತುಕೊಳ್ಳಲಾಗುವುದಿಲ್ಲ.

ಉದಾಹರಣೆಗೆ, ಅತಿ ಹಳತಾದ ತಾಂತ್ರಿಕತೆಯನ್ನು ಹೊಂದಿದ್ದರೂ, ಉತ್ತಮ ಸಾಧನೆಯನ್ನು ಹೊಂದಿರುವ ಕಂಪನಿಯೆಂದರೆ ಟಿಸ್ಕೊ. ಹತ್ತು ವರ್ಷಗಳ ಹಿಂದೆಯೇ ಟಿಸ್ಕೊವಿನ ಯಂತ್ರೋಪಕರಣಗಳನ್ನು ಕಿಟಕಿಯಿಂದಾಚೆಗೆ ಎಸೆಯಬೇಕಿತ್ತು. ಇತರೆ ಜಪಾನಿ ಕಂಪನಿಗಳು ಉಪಯೋಗಿಸುವ ಶಕ್ತಿಯ ಎರಡರಷ್ಟನ್ನು ಉಪಯೋಗಿಸುತ್ತಾ, ತನ್ನ ಪೂರ್ಣ ಹಳತಾದ ತಾಂತ್ರಿಕತೆಯಿಂದ ಉಕ್ಕನ್ನು ಈ ಕಂಪನಿ ತಯಾರಿಸುತ್ತಿದೆ. ಆದರೂ ಇದರಷ್ಟೇ ಹಳತಾದ ತಾಂತ್ರಿಕತೆಯನ್ನುಪಯೋಗಿಸುತ್ತಿರುವ ಸೇಲ್‌ಗಿಂತ (SAIL) ಟಿಸ್ಕೊ ಚೆನ್ನಾಗಿ ನಡೆಯುತ್ತಿದೆ. ಇತ್ತೀಚಿನ ಅಂಕಿ ಅಂಶಗಳ ಪ್ರಕಾರ, ಟಿಸ್ಕೊವಿನಷ್ಟೇ ಅಥವಾ ಅದಕ್ಕಿಂತ ಸ್ವಲ್ಪ ಉತ್ತಮವಾಗಿರುವ ತಾಂತ್ರಿಕತೆ ಹೊಂದಿರುವ ಸೇಲ್‌ನ ಘಟಕಗಳು ತಮ್ಮ ಉತ್ಪಾದನ ಮಿತಿಯ ಸರಾಸರಿ 65% ಉತ್ಪಾದಿಸಿದರೆ ಟಿಸ್ಕೊ 102%ರಷ್ಟು ಉತ್ಪಾದಿಸುತ್ತಿದೆ.

ಇದರಿಂದ ನಾವು ತಿಳಿಯಬೇಕಾದ್ದೆಂದರೆ ಒಬ್ಬ ನಿರ್ವಾಹಕನಿಗೆ ಮಾನವಸಂಬಂಧ ನಿರ್ವಹಣೆ ಎಂದರೆ ಅಂತಿಮವಾಗಿ ಸಾಧನಾ ನಿರ್ವಹಣೆಯೇ ಆಗಿದೆ. ನಾನು ಈಗ ತಾಂತ್ರಿಕತೆಯಲ್ಲಿ ಬದಲಾವಣೆ ಮಾಡಬಲ್ಲಂತಹ ಕೆಲವೇ ಅಧಿಕಾರಿಗಳ ಬಗ್ಗೆ ಮಾತನಾಡುತ್ತಿಲ್ಲ. ಆದರೆ ಇಲ್ಲಿ ನಾನು ಕಾಣುತ್ತಿರುವ ತಾಂತ್ರಿಕತೆಯನ್ನು ಬದಲಾಯಿಸಲಾಗದ ಮಧ್ಯಮವರ್ಗದ ನಿರ್ವಾಹಕರ ಬಗ್ಗೆ ಹೇಳುತ್ತಿದ್ದೇನೆ. ಅಗತ್ಯವಾಗಿ ದಿನನಿತ್ಯದ ಸಂಬಂಧಗಳನ್ನು ನಿರ್ವಹಿಸುವ ಹೊಣೆ ಅವರದ್ದಾಗಿದೆ. ಈ ದಿಶೆಯಲ್ಲಿ, ಏನಾಗಬೇಕು ಎಂಬುದರ ಬದಲಾಗಿ, ನಾವು ಏನು ಮಾಡಲು ಸಾಧ್ಯ ಎಂಬುದರ ಬಗ್ಗೆ ನಾನು ಹೆಚ್ಚು ಪ್ರಾಮುಖ್ಯ (ಒತ್ತು) ಕೊಡಲಿಚ್ಛಿಸುತ್ತೇನೆ.

## ಶಿಕ್ಷೆ ಮತ್ತು ಬಹುಮಾನ

ನಮ್ಮ ಸುತ್ತಲಿನ ಜನ ಬದಲಾಯಿಸುತ್ತಿದ್ದಾರೆ. ಮೂವತ್ತು ವರ್ಷಗಳ ಹಿಂದೆ, ನಾನು ಮೊತ್ತ ಮೊದಲ ಬಾರಿಗೆ ಒಂದು ಜವಳಿ ಗಿರಣಿಯನ್ನು ಸೇರಿದಾಗ, ಆ ವಿಭಾಗದ ಮುಖ್ಯಸ್ಥ ಹೇಳಿದ ಮಾತು ನನಗೆ ಜ್ಞಾಪಕಕ್ಕೆ ಬರುತ್ತದೆ: "ನೋಡಿ, ನಾವು ಇಲ್ಲಿ ಬಹಳ ಶಿಸ್ತನ್ನು ಪಾಲಿಸುತ್ತೇವೆ. ಯಾವುದೇ ಕೆಲಸಗಾರನನ್ನು ಮುಟ್ಟದೆ ಅವನನ್ನು ಒದ್ದು ಓಡಿಸುತ್ತೇವೆ." ಆಗಿನ ಕಾಲದಲ್ಲಿ ಶಿಸ್ತನ್ನು ಹಾಗೆ ಪರಿಪಾಲಿಸುತ್ತಿದ್ದರು. ಭಯದ ಬಳಕೆ ಬಹಳವಾಗಿತ್ತು. ಜನರನ್ನು ಇಚ್ಛಾನುಸಾರ ಕೆಲಸದಿಂದ ತೆಗೆಯಬಹುದಿತ್ತು. ಈವತ್ತಿನ ದಿವಸ ಇಲ್ಲಿ ಕುಳಿತಿರುವ ಯಾರೇ ಆಗಲಿ, ಆತ ಮದ್ರಾಸಿನಿಂದ ಬಂದಿರಲಿ, ಇಲ್ಲ ಸುತ್ತಮುತ್ತಲಿನ ಊರಿನಿಂದ ಬಂದಿರಲಿ—ನಾನು ಯಾರನ್ನೇ ಆಗಲಿ ಕೆಲಸದಿಂದ ವಜಾಮಾಡಬಲ್ಲೆ ಎಂದು ಹೇಳಲಾರರು. ನಿಜವಾಗಿ ಒಬ್ಬ ಕೈಕೆಳಗಿನವನನ್ನು ವಜಾ ಮಾಡುವುದೆಂದರೆ ಅದು ಪೂರ್ಣಾವಧಿಯ ಕೆಲಸ ; ಮತ್ತೆ ಯಾರು ಕೆಲಸ ಬಿಟ್ಟು ಹೋಗುತ್ತಾರೆ ಎಂಬುದರ ಸಾಧ್ಯತೆ ಕೇವಲ ಅರ್ಧ ಅರ್ಧ. ಆದ್ದರಿಂದ ಯಾವುದೇ ಪರಿಜ್ಞಾನವಿರುವ ನಿರ್ವಾಹಕ ಅಂತಹ ಕೆಲಸವನ್ನು ತೆಗೆದುಕೊಳ್ಳುವುದಿಲ್ಲ. ಭಯ ಕಿಟಕಿಯಿಂದ ತೂರಿ ಹೋಗಿದೆ. ನನಗೆ ಕುತೂಹಲಕರವಾಗಿ ಕಾಣುವುದು, ಅದು ಕೇವಲ ಕಾರ್ಯಕ್ಷೇತ್ರದಿಂದ ಮಾತ್ರವಲ್ಲ, ಮನೆಯಿಂದಲೂ ಹೊರಹೋಗಿದೆ. ನನಗೆ ನೆನಪಿದೆ. ನಾವು ಆರು ಜನ ಮಕ್ಕಳು. ನಮ್ಮ ತಾಯಿ ಆರು ಲೋಟ ಹಾಲನ್ನು ಇಟ್ಟು, ಯಾರು ಮೂರು ನಿಮಿಷದಲ್ಲಿ ಹಾಲನ್ನು ಕುಡಿಯುವುದಿಲ್ಲವೊ ಅವರಿಗೆ ಕಪಾಳಮೋಕ್ಷವಾಗುತ್ತದೆ ಎನ್ನುತ್ತಿದ್ದರು. ಮರುಕ್ಷಣ ಲೋಟಗಳು ಖಾಲಿಯಾಗಿರುತ್ತಿದ್ದವು. ಆದರೆ ಇಂದು, ಸಂತಾನ ಯೋಜನೆಯಿಂದಾಗಲೂ ಅಥವಾ ಶಕ್ತಿಯಿಲ್ಲದೆಯೊ, ಏನೇ ಕಾರಣವಿರಲಿ, ಜನರಿಗೆ ಒಂದು ಅಥವಾ ಎರಡು ಮಕ್ಕಳಿವೆ. ತಾಯಿ ಲೋಟಕ್ಕೆ ಹಾಲನ್ನು ಬಗ್ಗಿಸಿ "ಮಗು, ನಿನ್ನ ಹಾಲು ತಯಾರಿದೆ.' ಎನ್ನುತ್ತಾಳೆ "ಮಮ್ಮಿ, ಇವತ್ತು ನನಗೆ ಹಾಲು ಬೇಡ" ಎನ್ನುತ್ತಾನೆ. ಆಗ ಅವಳು ಹೇಳುತ್ತಾಳೆ, "ಸ್ವಲ್ಪ ಬೋರನ್‌ವಿಟ ಹಾಕಲೇ ಅಥವಾ ನಿನಗೆ ಇವತ್ತು ಹಾರ್‌ಲಿಕ್ಸ್ ಬೇಕೆ ? ನಿನಗೆ ಸಂಜೆಗೆ ಕ್ಯಾಡ್‌ಬರೀ ಕೊಡುತ್ತೇನೆ" ಎಂದು. ನೀವೇ ಕಾಣುವಂತೆ ಮನೆಗಳಲ್ಲಿ ಭಯ ಕಿಟಕಿಯಿಂದ ತೂರಿ ಹೋಗಿದೆ. ರಸ್ತೆಗಳಲ್ಲಿ ಪೊಲೀಸಿನವರು ನಮಗೆ ಭಯಹುಟ್ಟಿಸುತ್ತಿದ್ದರು. ಇವತ್ತು ಅವರನ್ನು ಕಂಡರೆ ಯಾರೂ ಹೆದರುವುದಿಲ್ಲ. ನಮ್ಮ ಕಾಲೇಜಿನ ದಿನಗಳಲ್ಲಿ ಉಪಾಧ್ಯಾಯರು ಮತ್ತು ಪ್ರಾಧ್ಯಾಪಕರನ್ನು ಕಂಡರೆ, ಅವರಲ್ಲಿ ಕೆಲವರಿಗೆ ಪಾಠ ಹೇಳಲು ಚೆನ್ನಾಗಿ ಬರುವುದಿಲ್ಲ ಎಂದು ಗೊತ್ತಿದ್ದರೂ, ನಾವು ಹೆದರುತ್ತಿದ್ದೆವು. ಇವತ್ತು ಪರಿಸ್ಥಿತಿ ಬದಲಾಗಿದೆ ಮತ್ತು ನಮ್ಮ ಸಮಾಜದಲ್ಲಿ ಭಯದ ಉಪಯೋಗ ಕಡಿಮೆಯಾಗಿದೆ.

ನಿಜವಾಗಿ ಈ ಪ್ರವೃತ್ತಿ ಜಗತ್ತಿನ ಎಲ್ಲ ಸಮಾಜಗಳಲ್ಲಿ ಸುಮಾರು ಕಳೆದ ಒಂದೂವರೆ ಪೀಳಿಗೆಯಲ್ಲಿ ಕಂಡುಬರುತ್ತಿದೆ. ಆದ್ದರಿಂದ ನಾವು, ನಿರ್ವಾಹಕರು, ತೀರ ಅನಿವಾರ್ಯವಾದ ಕೆಲವೊಂದು ಸಂದರ್ಭಗಳನ್ನು ಬಿಟ್ಟು ಉಳಿದಂತೆ ಭಯವನ್ನು ಉಪಯೋಗಿಸದೆ ನಿರ್ವಹಣೆ ಮಾಡಬೇಕು. ಒಬ್ಬನ ನೌಕರಿ ಖಾತ್ರಿಯಿಲ್ಲದಿರುವಾಗ ಅಥವಾ ಆತ ಪರೀಕ್ಷಾರ್ಥಿಯಾಗಿರುವಾಗ ನಾವು ಭಯವನ್ನು ಉಪಯೋಗಿಸುತ್ತೇವೆ. ಆದರೆ ಅವನಿಗೆ ದೃಢೀಕರಣ ಪತ್ರ ಸಿಕ್ಕಿದೊಡನೆ, ಇನ್ನು ಭಯದ ಉಪಯೋಗವಿಲ್ಲ ಎಂಬುದನ್ನು ಅರಿತಿರುತ್ತೇವೆ.

ಮುಂದಿನ ಹಂತ ಕೋಲಿನಿಂದ ಕಾರ್ಯವಾಗದಿದ್ದರೆ ಗಜ್ಜರಿಯಿಂದ ಪ್ರಯತ್ನಿಸುವುದು. ಅವನಿಗೆ ಕೆಲವು ಉತ್ತೇಜಕಗಳನ್ನು ಕೊಡುವುದು. ಒಂದು ಅತಿಸುಲಭವಾದ ಉತ್ತೇಜಕವೆಂದರೆ, ಹೆಚ್ಚುವರಿ ವೇಳೆ ಭತ್ಯ. ಮತ್ತೆ ಅದರಿಂದಾಗಿ ಏನಾಗುತ್ತದೆ ಎಂಬುದು ನಿಮಗೆಲ್ಲರಿಗೂ ತಿಳಿದ ವಿಷಯ. ಅದು ಒಮ್ಮೆ ಜಾರಿಗೆ ಬಂದರೆ ಜನ ಈ ಭತ್ಯೆಗಾಗೇ ಕೆಲಸ ಮಾಡುತ್ತಾರೆ. ಒಬ್ಬ ಕೆಲಸಗಾರ ನನಗೆ ಹೇಳಿದಂತೆ ವೇಳೆ ಎಂದರೆ ದುಡ್ಡು. ಆದರೆ ಹೆಚ್ಚುವರಿ ವೇಳೆ ಎಂದರೆ ಹೆಚ್ಚು ಹಣ. ಸೇಲ್ ಇದರಿಂದಾಗಿ ತೊಂದರೆಗೀಡಾಯಿತು. ಅಲ್ಲಿನ ಹೆಚ್ಚುವರಿ ಭತ್ಯದ ಖರ್ಚುಪಟ್ಟಿ ವರ್ಷಕ್ಕೆ ರೂ. 65 ಕೋಟಿ ಎಂದು ಕೇಳಿದ್ದೇನೆ. ವಿ. ಕೃಷ್ಣಮೂರ್ತಿ ಅಧಿಕಾರ ವಹಿಸಿಕೊಂಡ ಮೇಲೆ ಮೊಟ್ಟಮೊದಲು ಹೇಳಿದ್ದು, ಹೆಚ್ಚುವರಿ ಭತ್ಯ ಇರಲೇಬಾರದು ಎಂದು. ಒಂದು ವರ್ಷದ ಒಳಗಾಗಿ ಹೆಚ್ಚುವರಿ ಭತ್ಯ ಪೂರ್ಣವಾಗಿ ನಿಂತಿತು. ಆದರೆ ಸಹಜವಾಗಿ ಅದು ತೊಂದರೆಗಳನ್ನು ಸೃಷ್ಟಿಸಿತು. ಮೊದಲ ಮೂರು ತಿಂಗಳಲ್ಲಿ

ಉತ್ಪಾದನೆ ಶೇ. 14ರಷ್ಟು ಇಳಿಯಿತು. ಆದರೆ ಅವರು ತನ್ನ ನಿಶ್ಚಯವನ್ನು ಬದಲಿಸಲಿಲ್ಲ. ಉತ್ಪಾದನೆ ಮೊದಲಿನ ಸ್ಥಿತಿಗೇ ಬಂತು. ಇದೇ ಗಮನಿಸಬೇಕಾದ ವಿಷಯ. ನಾವು ಉತ್ಪಾದನೆ ಹೊಂದಲು, ಸಾಧನೆ ಹೊಂದಲು ವಿತ್ತೀಯ ಉತ್ತೇಜಕಗಳನ್ನು ಕೊಟ್ಟರೆ ಇಂದಲ್ಲ ನಾಳೆ ಅದರ ಪರಿಣಾಮಗಳು ನಮ್ಮನ್ನೆ ಎದುರಿಸುತ್ತವೆ. ಇದೊಂದು ದೊಡ್ಡ ಸಮಸ್ಯೆ.

ಹಣ ಮತ್ತು ಭಯ ಎರಡನ್ನೂ ಕಿಟಕಿಯಲ್ಲಿ ತೂರಿದ್ದಾದರೆ, ಕೋಲು ಮತ್ತು ಗಜ್ಜರಿಗಳನ್ನು ಎಸೆದಿದ್ದಾದರೆ, ನಾವು ಏನನ್ನು ಬಳಸಬಹುದು ? ನಾವು ಸಾಧನಾ ನಿರ್ವಹಣೆಯ ಬಗ್ಗೆ ಮಾತನಾಡುವಾಗ ಇದೇ ನಮ್ಮ ಮೂಲ ಸಮಸ್ಯೆಯಾಗುತ್ತದೆ. ಇದಕ್ಕೆ ನನ್ನ ಸಲಹೆಯೆಂದರೆ ನಾವು ಮೂರು ವಸ್ತುಗಳನ್ನು ಉಪಯೋಗಿಸಬಹುದು—ಬೇರೆ ಬೇರೆ, ಯಾಗಿ ಅಲ್ಲ, ಒಟ್ಟಿಗೇ. ಮೊದಲನೆಯದು ತಾದಾತ್ಮ್ಯ, ಎರಡನೆಯದು ಆತ್ಮವಿಶ್ವಾಸ, ಮೂರನೆಯದು ವಿಕಾಸದ ಅರಿವು.

## ತಾದಾತ್ಮ್ಯ

ಅತ್ಯುತ್ತಮ ಕೆಲಸವನ್ನು ಮಾಡುತ್ತಿರುವ ನಿರ್ವಾಹಕರನ್ನು ನೀವು ಕಂಡಾಗಲೆಲ್ಲಾ ಅವರು ಯಾವ ವಿಧಾನವನ್ನು ಅನುಸರಿಸಿದ್ದಾರ ಎಂಬುವನ್ನು ವಿಚಾರಿಸಿ ನೋಡಿ. ಅದರಲ್ಲೂ ಸಂಘಟಿತ ಕ್ಷೇತ್ರದ ದೊಡ್ಡ ಘಟಕಗಳಲ್ಲಿ, ಅವರು ಹಣವನ್ನಾಗಲಿ, ಭಯವನ್ನಾಗಲಿ ಪ್ರೇರಕವನ್ನಾಗಿ ಉಪಯೋಗಿಸಿದ್ದನ್ನು ಅಪರೂಪವಾಗಿ ಕಾಣುತ್ತೀರಿ. ಅವರು ಮಾಡಿದ್ದೆಂದರೆ ತನ್ನತನದ ಅರಿವನ್ನು ಸೃಷ್ಟಿಸಿದ್ದಾರೆ. ಟಿಸ್ಕೋವಿನ ಉದಾಹರಣೆ ತೆಗೆದುಕೊಳ್ಳಿ. ಟಿಸ್ಕೋವಿನ ಶ್ರೇಷ್ಠತೆಗಳಲ್ಲೊಂದು ಅದರ ಪ್ರತಿ ಕೆಲಸಗಾರನೂ ತನ್ನನ್ನು ಕಂಪನಿಯೊಂದಿಗೆ ಗುರುತಿಸಿಕೊಳ್ಳುತ್ತಾನೆ. ಜನತಾ ಸರ್ಕಾರದ ಕಾಲದಲ್ಲಿ ಜಾರ್ಜ್ ಫರ್ನಾಂಡಿಸ್ ಮತ್ತು ಬಿಜು ಪಟ್ನಾಯಕ್ ಟಿಸ್ಕೋವನ್ನು ರಾಷ್ಟ್ರೀಕರಣ ಮಾಡಬೇಕು ಎಂಬ ಸೂಚನೆಯನ್ನು ಮಾಡಿದ್ದರು. ಆ ಸೂಚನೆಗೆ ಪ್ರಬಲ ಪ್ರತಿರೋಧದ ಧ್ವನಿ ಎದ್ದದ್ದು ಕೆಲಸಗಾರರಿಂದ —"ನಮ್ಮ ಕಂಪನಿಯನ್ನು ನೀವು ರಾಷ್ಟ್ರೀಕರಣ ಮಾಡಲಾರಿರಿ." ನಮ್ಮ ಕಂಪನಿ ಎಂದರೇನು ? ಟಿಸ್ಕೋವಿನ ಆ 60,000 ಕೆಲಸಗಾರರು ಕಂಪನಿಯ ಷೇರುಬಂಡವಾಳದ ಶೇಕಡ ಒಂದನ್ನೂ ಹೊಂದಿಲ್ಲ. ಆದ್ದರಿಂದ ಕಾನೂನಿನ ಸ್ವಾಮಿತ್ವಕ್ಕಿಂತ ಭಾವನಾ ಸ್ವಾಮಿತ್ವ ಅತಿ ಮುಖ್ಯ ಮತ್ತು ಅದು ಬಹಳ ಪರಿಣಾಮಕಾರಿಯಾಗಿ ಕೆಲಸ ಮಾಡುತ್ತದೆ ಎಂಬುದನ್ನು ಕಾಣಬಹುದು.

ನಿಜವಾಗಿ ಈ ಭಾವನಾ ಸ್ವಾಮಿತ್ವ ಕೆಲಸ ಮಾಡುವುದನ್ನು ನೋಡಲು ನೀವು ಕಾರ್ಖಾನೆಗಳ ಕಡೆಗೆ ನೋಡಬೇಕಾಗಿಲ್ಲ. ನಾವು ಜೀತದ ಆಳುಗಳ ಬಗ್ಗೆ ಮಾತನಾಡುವಾಗ ಯಾರಾದರೂ ಗೃಹಿಣಿಗಿಂತ ಹೆಚ್ಚು ಅಸ್ವತಂತ್ರ ಆಳನ್ನು ನೋಡಿದ್ದೀರಾ ? ಎಲ್ಲರಿಗಿಂತ ಮುಂದಾಗಿ ಎದ್ದು, ಕೊನೆಯಲ್ಲಿ ಮಲಗಿ, ಭಾನುವಾರವಿರಲಿ ಇತರ ಹಬ್ಬ ಹರಿದಿನಗಳಲ್ಲೂ ರಜ ಇಲ್ಲದೆ–ವಾಸ್ತವವಾಗಿ ಅಂದು ಹೆಚ್ಚು ಕೆಲಸ ಆಕೆಗೆ; ಏಕೆಂದರೆ ಮನೆಯಲ್ಲಿ, ಇಂದು ರಜ ದಿನವಾದ್ದರಿಂದ ಹೆಚ್ಚು ಕಟ್ಲೆ ತಿಂಡಿ ಏನಾದರೂ ಮಾಡು ಎನ್ನುತ್ತಾರೆ—ಹಾಗೆ ಕೆಲಸ ಮಾಡುವ ಆ ಹುಡುಗಿ ಆ ಮನೆಯಲ್ಲಿ ಹುಟ್ಟಲಿಲ್ಲ. ಬೇರೆ ಎಲ್ಲೋ ಹುಟ್ಟಿ ಇಪ್ಪತ್ತು ವರ್ಷಗಳವರೆಗೆ ಬೆಳೆದು, ಯಾವುದೊ ಒಂದು ಬೆಳಗ್ಗೆಯೊ, ಮಧ್ಯಾಹ್ನವೊ, ಸಂಜೆಯೊ ಅವಳ ತಲೆಯ ಮೇಲೆ ನೀವು ಸ್ವಲ್ಪ ಅಕ್ಕಿ ಕಾಳು ಹಾಕಿ ಅವಳನ್ನ ಒಳಕ್ಕೆ ಎಳೆದುಕೊಂಡು ಇದು ನಿನ್ನ ಮನೆ ಎಂದು ಹೇಳುತ್ತೀರಿ. ಅದು ಬಹಳ ಹಾಸ್ಯಾಸ್ಪದ. ಆದರೆ ಅದು ಕೆಲಸ ಮಾಡುತ್ತದೆ. ಇಪ್ಪತ್ತು ದಿನಗಳ ಒಳಗೆ ಅವಳು ನನ್ನ ಮನೆ ಎಂದಾಗ ಅದು ಅವಳು ಇಪ್ಪತ್ತು ವರ್ಷ ಬೆಳೆದ ಮನೆಗಲ್ಲ; ಆದರೆ ಈ ಇಪ್ಪತ್ತು ದಿವಸದಿಂದ ಇರುವ ಮನೆಗೆ ಅನ್ವಯವಾಗುತ್ತದೆ. ಒಮ್ಮೆ ತನ್ನತನದ ಅರಿವು ಮೂಡಿದರೆ ಜನ ತಮ್ಮ ಸಂಸ್ಥೆಯನ್ನು ಒಪ್ಪಿಕೊಳ್ಳುತ್ತಾರೆ ಮತ್ತು ಅದಕ್ಕಾಗಿ ಕೆಲಸ ಮಾಡುತ್ತಾರೆ. ಇದು ಬಹಳ ಮುಖ್ಯವಾದದ್ದು. ಇದನ್ನು ನಾನು ಬಹಳ ಸಂದರ್ಭದಲ್ಲಿ ನೋಡಿದ್ದೇನೆ.

ನಾನು ನಮ್ಮ ರಕ್ಷಣಾ ಪಡೆಗಳ ಉದಾಹರಣೆಯನ್ನು ಕೊಡಬಯಸುತ್ತೇನೆ. ನಾವು ಕಾರ್ಖಾನೆಗಳಲ್ಲಿ ಪ್ರೇರಣೆ ಮತ್ತು ಸಾಧನೆಯ ಬಗ್ಗೆ ಮಾತನಾಡುವಾಗ ನಾವು ತಿಳಿದುಕೊಳ್ಳುವುದೇನೆಂದರೆ, ಒಬ್ಬ ತನ್ನ ಕೆಲಸದ ಜಾಗದಲ್ಲಿ ಎಂಟು ಘಂಟೆಗಳು ಇದ್ದು ಕೇವಲ ನಾಲ್ಕು ಘಂಟೆಯ ಕೆಲಸ ಮಾಡುತ್ತಿರುವಾತ ಒಂದು ಘಂಟೆ ಹೆಚ್ಚು ಕೆಲಸ ಮಾಡಿದರೆ ನಾವು ಬಹಳ ಸಂತುಷ್ಟರಾಗುತ್ತೇವೆ ಮತ್ತು ಆತ ಪ್ರೇರಿತನಾಗಿದ್ದಾನೆ ಎಂದು ಹೇಳುತ್ತೇವೆ. ಸೇನೆಯಲ್ಲಿ ಒಬ್ಬ ಸೈನಿಕ ಪ್ರೇರಿತನಾಗಿದ್ದಾನೆ ಎಂದರೆ ಆತ ತನ್ನ ಜೀವವನ್ನ ಪಣಒಡ್ಡಲು ಸಿದ್ಧ ಎಂದರ್ಥ. ನೆನಪಿಡಿ. ಒಬ್ಬ ಸೇನಾಧಿಪತಿ ತನ್ನ ಸೈನಿಕನಿಗೆ ಶತ್ರು ನೆಲೆಯನ್ನು ಹಿಡಿಯಲು ಹೋಗು ಎಂದಾಗ, ಶತ್ರು ಶ್ವೇತ ಧ್ವಜ ಹಿಡಿದು ಕುಳಿತಿದ್ದಾನೆ ಎಂದೇ ಆ ಸೈನಿಕ ನಂಬಿರುವುದಿಲ್ಲ. ಶತ್ರು ಭಯಂಕರ ತೋಪಿನೊಂದಿಗೆ ಕುಳಿತಿದ್ದಾನೆ ಎಂದು ಆ ಸೈನಿಕನಿಗೆ ತಿಳಿದಿರುತ್ತದೆ. ಅಂತಹ ಸಮಯದಲ್ಲಿ ಪ್ರತಿಯೊಬ್ಬ ಸೈನಿಕನೂ, ನಾನು ಸೆರೆಸಿಕ್ಕುವ ಸಾಧ್ಯತೆ ಎಷ್ಟು, ನನಗೆ ಪ್ರಶಸ್ತಿ ಸಿಕ್ಕುವ ಸಾಧ್ಯತೆ ಎಷ್ಟು, ಅಥವಾ ಗುಂಡು ತಗಲಿ ಸಮತಲವಾಗಿ ಮಲಗುವ ಸಾಧ್ಯತೆ ಎಷ್ಟು ಎಂಬ ವೆಚ್ಚಲಾಭ ವಿಶ್ಲೇಷಣೆ ಮಾಡಿದರೆ ಸೇನೆ ಕೆಲಸ ಮಾಡಲು ಸಾಧ್ಯ ಎಂದು ನಿಮಗೆ ಅನಿಸುತ್ತದೆಯೆ ? ಆದ್ದರಿಂದ ಅವರು ಸೈನಿಕರಿಗೆ ಪ್ರೇರಣೆಯ ಮಾತನ್ನಾಡಿದಾಗ ಹೇಳುವುದೆಂದರೆ, ನಿನ್ನ ಜೀವವನ್ನ ಪಣವಾಗಿಡು ಎಂದು. ಅದನ್ನೇ ಸೈನಿಕರು ಮಾಡುವುದು. ಅವರು ಹೇಗೆ ಆ ಪ್ರೇರಣೆಯನ್ನು ಸಾಧಿಸುತ್ತಾರೆ ಎಂಬುದನ್ನು ನೋಡಿದರೆ, ಅಲ್ಲಿ ತನ್ನತನ ಸೃಷ್ಟಿಯಾದದ್ದನ್ನು ನೋಡುತ್ತೀರಿ. ಒಬ್ಬ ಮನುಷ್ಯ ಒಂದು ತುಕಡಿಯನ್ನ ಸೇರಿದ ದಿನ ಅವನಿಗೆ ಅವನ ಸಮವಸ್ತ್ರದಿಂದ, ಆ ತುಕಡಿಯ ಧ್ವಜಲಾಂಛನಗಳಿಂದ ತನ್ನತನವನ್ನು ಕೊಡಲಾಗುತ್ತದೆ. ಪ್ರತಿಯೊಂದು ಪಡೆಗೂ ತನ್ನದೇ ಆದ ಧ್ವಜಲಾಂಛನಗಳಿವೆ ಮತ್ತು ಅದರ ಪ್ರತಿಯೊಬ್ಬ ಸೈನಿಕನಲ್ಲೂ ಆ ಧ್ವಜಲಾಂಛನಗಳ ಬಗ್ಗೆ ಅಭಿಮಾನ ಮೂಡಿಸುತ್ತಾರೆ.

## ಜಪಾನೀಯರ ಉದಾಹರಣೆ

ಬಹಳ ಹಿಂದಿನ ಕಾಲದಿಂದಲೂ ಈ ವಿಧಾನವನ್ನು ಎಲ್ಲ ಸೇನೆಗಳಲ್ಲೂ ಅನುಸರಿಸಿದ್ದಾರೆ. ಅಧ್ಯಕ್ಷನಿಂದ ಹಿಡಿದು ಕಸ ಗುಡಿಸುವವನ ವರೆಗೆ ಒಂದೇ ಸಮವಸ್ತ್ರ ತೊಟ್ಟು, ಜಪಾನೀಯರು ಮಾತ್ರ ಈ ವಿಧಾನವನ್ನು ಸಾಧನೆಯಲ್ಲಿ ಉಪಯೋಗಿಸಿದ್ದಾರೆ. ನಮ್ಮ ಕಣ್ಣಿಗೆ ಕಾಣುವ ತಾದಾತ್ಮ್ಯ ಬಹಳ ಮುಖ್ಯ. ಇದನ್ನು ಧಾರ್ಮಿಕ ಗುಂಪುಗಳಲ್ಲೂ ಕಾಣುತ್ತೇವೆ. ನೀವು ರಜನೀಶರ ಅನುಯಾಯಿಗಳಾದರೆ ನಿಮ್ಮನ್ನು ಗುರುತಿಸುವಂತಹ ಒಂದು ಬಣ್ಣದ ಸಮವಸ್ತ್ರವನ್ನ ಧರಿಸುತ್ತೀರಿ. ಈ ತರಹದ ತನ್ನತನವನ್ನು ಸೃಷ್ಟಿಸುವುದು ಒಬ್ಬ ವ್ಯಕ್ತಿಯನ್ನು ಪ್ರೇರೇಪಿಸುವುದಕ್ಕೆ ಬಹಳ ಮುಖ್ಯ.

ಈ ತನ್ನತನವನ್ನು ಸೃಷ್ಟಿಸುವ ಎರಡನೇ ವಿಧಾನ ಎಂದರೆ ಜನರನ್ನು ಒಟ್ಟಿಗೆ ದೈಹಿಕ ಕೆಲಸವನ್ನು ಮಾಡುವಂತೆ ಮಾಡುವುದು. ಅತಿಸುಲಭದ ದೈಹಿಕ ಕೆಲಸವೆಂದರೆ ಹಾಡುವುದು. ಜಪಾನಿನಲ್ಲಿ ಸೈರನ್ (ಸಿಳ್ಳು) ಕೂಗಿದ ತತ್‌ಕ್ಷಣ ಪ್ರತಿಯೊಬ್ಬರೂ ಎದ್ದು ನಿಂತು, ತಮ್ಮ ಕಂಪನಿಯ ಗೀತೆಯನ್ನು ಹಾಡುತ್ತಾರೆ. ಅದೇ ನಮ್ಮಲ್ಲಿ, ನಮ್ಮ ರಾಷ್ಟ್ರಗೀತೆ ಬೇಕಾದರೆ ಯಾರಾದರೂ ರೆಕಾರ್ಡ್ ಹಾಕಬೇಕು. ಎಲ್ಲರೂ ಅಂತಿಮಯಾತ್ರೆಯಲ್ಲಿ ಪಾಲ್ಗೊಂಡವರಂತೆ ಮೌನವಾಗಿ ಎದ್ದು ನಿಲ್ಲುತ್ತಾರೆ. ನೀವು ಯಾರನ್ನಾದರೂ ನೀನೇಕೆ ಹಾಡುವುದಿಲ್ಲ ಎಂದು ಕೇಳಿದರೆ, ನನ್ನ ಈ ಕಂಠದಿಂದ ಹೇಗೆ ಹಾಡಲಿ ಎನ್ನುತ್ತಾರೆ. ಅದೇ ನೀವೊಂದು ಅವನ ದೇವರ ಮೇಲೆ ಆರತಿಯ ಹಾಡನ್ನು ಶುರುಮಾಡಿದರೆ ಅವನೂ ಹಾಡುತ್ತಾನೆ. ಏಕೆ ? ಏಕೆಂದರೆ ದೇವರು ಅವನದು. ಆದರೆ ದೇಶ, ನಲವತ್ತು ವರ್ಷಗಳ ನಂತರವೂ ನಮ್ಮದೆಂದು ನಮಗೆ ಖಾತ್ರಿಯಿಲ್ಲ. ಅದು ಇನ್ನೂ ಪರೀಕ್ಷಾರ್ಥವಾಗೇ ಇದೆ.

ಜಪಾನಿನಲ್ಲಿ ಒಬ್ಬ ಕಂಪನಿ ಗೀತೆಯನ್ನ ಹಾಡುವುದರಿಂದ ಕಂಪನಿ ತನ್ನದೆಂದು ಜ್ಞಾಪಿಸಿಕೊಳ್ಳುತ್ತಾನೆ. ಗೀತೆಯಾದನಂತರ ಜನಸಂಪರ್ಕ ಸಾಧನದಲ್ಲಿ ಒಂದು, ಎರಡು, ಮೂರು, ನಾಲ್ಕು ಕೇಳಿಬರುತ್ತದೆ. ಎಲ್ಲರೂ ಮೂರು ನಿಮಿಷಗಳ ಕಾಲ ವ್ಯಾಯಾಮ ಮಾಡುತ್ತಾರೆ. ಅದು ಕೆಲಸಕ್ಕೆ ದೈಹಿಕ ತಯಾರಿ ಎಂದು. ಆದರೆ ನಾನು ಹೇಳುವುದು ದೈಹಿಕಕ್ಕಿಂತ ಮಾನಸಿಕ ತಯಾರಿ ಎಂದು. ಕಸ ಗುಡಿಸುವವ ಅಧ್ಯಕ್ಷರ ಕೋಣೆಯನ್ನು ಗುಡಿಸುತ್ತಿದ್ದಾನೆ. ಸೈರನ್ ಕೇಳಿಸುತ್ತದೆ. ಅಧ್ಯಕ್ಷ ಮತ್ತು ಕಸ ಗುಡಿಸುವವ ಇಬ್ಬರೂ ಒಟ್ಟಿಗೆ ನಿಲ್ಲುತ್ತಾರೆ. ಕಂಪನಿ ಗೀತೆಯನ್ನ ಹಾಡುತ್ತಾರೆ ಮತ್ತು ವ್ಯಾಯಾಮವನ್ನ ಮಾಡುತ್ತಾರೆ. ಆ ಕಸಗುಡಿಸುವವನಿಗೆ ಏನಾಗುತ್ತದೆ ? ಆತ ಹೇಳುತ್ತಾನೆ. "ಚೇರ್‌ಮನ್ ಬಹುಶಃ ನನಗಿಂತ ಹತ್ತೊ, ಹನ್ನೆರಡೊ, ಹದಿನೈದೊ

—ಎಷ್ಟೋ ನನಗೆ ಗೊತ್ತಿಲ್ಲ—ಸ್ವರಗಳು ಮೇಲಿದ್ದಾನೆ. ಆದರೆ ಆತ ನನ್ನ ಗುಂಪಿನ ಸದಸ್ಯ.'' ಅವನೊಡನೆ ತನ್ನನ್ನ ಗುರುತಿಸಿಕೊಳ್ಳುತ್ತಾನೆ ಏಕೆಂದರೆ ಆತ ತನ್ನಂತಹದೇ ಸಮವಸ್ತ್ರ ಧರಿಸಿದ್ದಾನೆ. ಅದೇ ಗೀತೆಯನ್ನು ಹಾಡುತ್ತಾನೆ ಮತ್ತೆ ಇಬ್ಬರೂ ಒಟ್ಟಿಗೆ ವ್ಯಾಯಾಮ ಮಾಡುತ್ತಾರೆ.

## ಸಮೂಹ ಚಟುವಟಿಕೆ

ಸಮೂಹ ಚಟುವಟಿಕೆ ತನ್ನತನವನ್ನು ಸೃಷ್ಟಿಸುವಲ್ಲಿ ಬಹಳ ಮುಖ್ಯ. ಜನರು ಒಟ್ಟಿಗೆ ಎದ್ದು ನಿಲ್ಲುತ್ತಾರೆ, ಕುಳಿತುಕೊಳ್ಳುತ್ತಾರೆ, ಹಾಡುತ್ತಾರೆ, ಮಂಡಿಯೂರುತ್ತಾರೆ. ಹಿಂದೂ ದೇವಾಲಯಗಳನ್ನು, ಅದರಲ್ಲೂ ಪ್ರಾಮುಖ್ಯವಾದವುಗಳನ್ನು, ಬೆಟ್ಟದ ಮೇಲೆ ದುರ್ಗಮಸ್ಥಳಗಳಲ್ಲಿ ಕಟ್ಟಲಾಗಿದೆ. ತಿರುಪತಿ, ಶಬರಿಮಲೈ, ವೈಷ್ಣೋದೇವಿ, ಬದ್ರಿನಾಥ ಅಥವಾ ಕೇದಾರ ಯಾವುದೇ ಆಗಲಿ. ಇದರ ಉದ್ದಿಶ್ಯವೇನು ? ಅದು ಜನರು ಒಟ್ಟಾಗಿ ಹತ್ತಲಿ ಎಂದು. ದೈಹಿಕ ಕೆಲಸ ಮಾಡದೆ ಅವರೂ ತಾವೂ ಒಂದೇ ಗುಂಪಿಗೆ ಸೇರಿದವರೆಂದು ಭಾವಿಸುವುದಿಲ್ಲ. ನಾನು ಬದರೀನಾಥದಲ್ಲಿ ಇದನ್ನ ನೋಡಿದ್ದೇನೆ. ಜನರು ಹತ್ತಲು ಶುರುಮಾಡುವಾಗ ಅವರು ಬೇರೆ ಬೇರೆ ಗುಂಪುಗಳಲ್ಲಿ ಇರುತ್ತಾರೆ— ಅವರು ಮಹಾರಾಷ್ಟ್ರೀಯರು, ತಮಿಳರು, ಆಂಧ್ರರು, ಕೇರಳದವರು. ಅವರು ಮೇಲೆ ತಲವುವಷ್ಟರಲ್ಲಿ ಪರಸ್ಪರರ ಭಾಷೆ ಮಾತನಾಡದಿದ್ದರೂ, ಕೆಲವು ಭಾವನೆಗಳು ಅವರಲ್ಲಿ ಮೂಡಿರುತ್ತವೆ. ಯಾವುದಾದರೂ ಒಂದು ಗುಂಪು ಮೇಲೆ ಬರದಿದ್ದರೆ ತಮ್ಮ ಗುಂಪಿನ ಯುವಕರನ್ನು ಅವರಿಗೆ ಸಹಾಯ ಮಾಡಲು ಕೆಳಗೆ ಕಳುಹಿಸುತ್ತಾರೆ. ಏಕೆಂದರೆ ಅವರು ನಮ್ಮ ಗುಂಪಿನವರು. ಅದು ಹೇಗೆಂದರೆ ? ನಾವು ಎರಡು ದಿವಸ ಜೊತೆಯಲ್ಲಿ ನಡೆದಿದ್ದೇವೆ. ಮಹಾರಾಷ್ಟ್ರದಲ್ಲಿ ಪಂಢರಾಪುರಕ್ಕೆ ಹೋಗುವಾಗ ಧುಂಡಿ ಎಂಬ ಒಂದು ಪದ್ಧತಿ ಇದೆ. ಅಂದರೆ ಒಂದು ಗುಂಪಿನ ಯಾತ್ರಾರ್ಥಿಗಳು ಒಟ್ಟಿಗೇ ನಡೆದು ಹೋಗುತ್ತಾರೆ. ಆಧುನಿಕ ಸಂಪರ್ಕ ಸಾಧನಗಳಿದ್ದಾಗ್ಯೂ ಅವರು ಯಾವುದೇ ವಾಹನವನ್ನು ಉಪಯೋಗಿಸದೆ, ಕೆಲವಾರು ದಿನಗಳು ನಡದೇ ಪಂಢರಾಪುರ ತಲುಪುತ್ತಾರೆ. ಇದನ್ನ ಬಹಳ ಪ್ರಾಮುಖ್ಯವಾಗಿ ಪರಿಗಣಿಸುತ್ತಾರೆ. ಏಕೆಂದರೆ ದೈಹಿಕ ಶ್ರಮ ಒಟ್ಟಿಗೆ ಮಾಡುವವರಲ್ಲಿ ತನ್ನತನವನ್ನು ಸೃಷ್ಟಿಸುತ್ತದೆ. ಈ ದಿವಸಗಳಲ್ಲಿ ಬದರಿನಾಥದವರೆವಿಗೂ ರಸ್ತೆಗಳನ್ನ ಮಾಡಿ ನಾವು ನಮಗೆ ಸಮಸ್ಯೆಗಳನ್ನ ತಂದುಕೊಳ್ಳುತ್ತಿದ್ದೇವೆ. ಬಸ್ಸಿನಿಂದಿಳಿದು ಬದರಿನಾಥನನ್ನ ನೋಡಬಹುದು. ನಾನು ಹೇಳುವುದೆಂದರೆ, ದೇವರು ಅಷ್ಟು ಸುಲಭದಲ್ಲಿ ಸಿಕ್ಕುವುದಾದರೆ ಎಲ್ಲ ಜನ ಅವನ ಬಳಿ ಹೋಗಿ ತಿರುಗಿ ಬರಲು ಸುಲಭವಾಗುವಂತೆ ಆತ ಮುಘಲ್‌ಸರಾಯ್‌ನಲ್ಲಿ ಕೂಡ ಇರಬೇಕು. ಈ ಸ್ಥಳಗಳನ್ನ ಚುನಾಯಿಸಿದ್ದರ ಉದ್ದೇಶ್ಯ, ಜನರಲ್ಲಿ ಒಂದು ಸಮೂಹಭಾವನೆಯನ್ನ ಮೂಡಿಸುವುದು.

## ಶಕ್ತಿಯ ಸೃಷ್ಟನೆ

ಸಾಮೂಹಿಕ ದೈಹಿಕ ಪರಿಶ್ರಮ ಅವಶ್ಯ ಮತ್ತೆ ನಾನು ಇನ್ನೊಂದು ವಿಷಯ ಗಮನಿಸಿದ್ದೆಂದರೆ, ಸಾಧನೆಯನ್ನು ಮಾಡಿರುವ ಎಲ್ಲ ಜನರೂ ಬಹಳಷ್ಟು ದೈಹಿಕ ಕಾರ್ಯ ಮತ್ತು ಶಕ್ತಿಯನ್ನು ಸೃಷ್ಟನೆ ಮಾಡುತ್ತಾರೆ. ವಾಸ್ತವವಾಗಿ ಒಂದು ಅಸ್ವಸ್ಥ ಘಟಕದಲ್ಲಿ ನನಗೆ ತತ್‌ಕ್ಷಣ ಗೋಚರವಾಗುವುದು ಆ ಘಟಕದಲ್ಲಿನ ಚೈತನ್ಯದ ಕೊರತೆ ಮತ್ತು ಸಮೂಹ ಕಾರ್ಯದ ಕೊರತೆ. ಜನ ನನ್ನನ್ನು ಸಾಮಾನ್ಯವಾಗಿ ಕೇಳುತ್ತಾರೆ, ''ನೀವು ಒಂದು ಅಸ್ವಸ್ಥ ಘಟಕವನ್ನು ಹೇಗೆ ಗುರುತಿಸುತ್ತೀರಿ ? ನೀವು ಅಥಾವೆ ಪಟ್ಟಿಯನ್ನು ನೋಡುತ್ತೀರಾ ?'' ಎಂದು. ನಾನು ಹೇಳುತ್ತೇನೆ—''ಇಲ್ಲ, ಏಕೆಂದರೆ ಇಂಡಿಯಾದಲ್ಲಿ ಯಾರೂ ಅಥಾವೆ ಪಟ್ಟಿಗಳನ್ನ ನಂಬುವುದಿಲ್ಲ. ನಾನು ಹೋಗಿ ಕಾರ್ಖಾನೆಯನ್ನ ನೋಡುತ್ತೇನೆ. ಅಲ್ಲಿ ಸೋರುತ್ತಿರುವ ಕೊಳವೆಗಳು, ಪಿಪಾಯಿಗಳು, ಹೊರಗೆ ಬಿದ್ದು ಹಾಳಾಗುತ್ತಿರುವ ಸಿಮೆಂಟು ಇದನ್ನ ಕಂಡು, ನಾನು ಅಲ್ಲಿನ ಕೆಲಸಗಾರರನ್ನು 'ಇದೆಲ್ಲ ಏನಪ್ಪ?' ಎಂದು ಕೇಳುತ್ತೇನೆ. ಅವನು ಏನು ಹೇಳುತ್ತಾನೆ ಎಂದು ನಿಮಗೆ ತಿಳಿದಿದೆ—''ಬಿಡಿಸ್ವಾಮಿ. ಇಲ್ಲಿ ಯಾರಿಗೂ ಚಿಂತೆಯಿಲ್ಲ. ನಾನು ನನ್ನ ಅಧಿಕಾರಿಗೆ ಹೇಳಿದರೂ ಏನೂ ಆಗೋಲ್ಲ. ನಿರ್ವಾಹಕರು ಸಹ ಏನೂ ಮಾಡಲು ಸಾಧ್ಯವಿಲ್ಲ.'' ಎಲ್ಲರಲ್ಲೂ ಅತಿ ಕಡಿಮೆ ಶಕ್ತಿ ಇದೆ.

ನೀವು ಕೆಲವೊಮ್ಮೆ ರೈಲ್ವೆ ಅಥವಾ ಇನ್ಯಾವುದಾದರೂ ಸರಕಾರಿ ಕಛೇರಿಗೆ ಹೋದಾಗ ಈ ಶಕ್ತಿ ಶೂನ್ಯತೆಯನ್ನ ಕಾಣುತ್ತೀರಿ. ಆದರೆ ಎಲ್ಲ ಕಡೆಯಲ್ಲೂ ಹೀಗೇ ಎಂದೇನಿಲ್ಲ. ಕೆಲವು ಕಡೆ ಜನ ಶಕ್ತಿಯುತವಾಗಿ ಓಡಾಡುವುದನ್ನ ಕಾಣುತ್ತೀರಿ. ಇನ್ನು ಕೆಲವೆಡೆ ಬಹಳ ಜರೂರಾದ ಕೆಲಸವನ್ನೂ ಲೋಕಾಭಿರಾಮವಾಗಿ ಮಾಡುವುದನ್ನ ಕಾಣುತ್ತೇವೆ.

ಮೊನ್ನೆ ನಾನು ರಿಸರ್ವ್ ಬ್ಯಾಂಕಿಗೆ ಹೋಗಿದ್ದಾಗ ಅಲ್ಲಿ ಒಬ್ಬ ಟೈಪಿಸ್ಟ್, ನ್ಯೂ ಯಾರ್ಕ್‌ನಲ್ಲಿ 1987ನೇ ಇಸವಿ ಜುಲೈ 27ರಿಂದ 31ರ ವರೆಗೆ ನಡೆಯಲಿರುವ ಸಮ್ಮೇಳನಕ್ಕಾಗಿ ವಿನಿಮಯ ಬಿಡುಗಡೆ ಪತ್ರವನ್ನ ಟೈಪ್ ಮಾಡುತ್ತಿದ್ದ. ಆ ಬಿಡುಗಡೆ ಪತ್ರದ ತಾರೀಖು 22 ಆಗಸ್ಟ್ ಎಂದು ಟೈಪಾಗಿತ್ತು. ನಾನು ಹೇಳಿದೆ ''ನೋಡಿಲ್ಲಿ, ನೀನು ತಪ್ಪು ಮಾಡುತ್ತಿದ್ದೀಯೆ. ಸಮ್ಮೇಳನ ಜುಲೈ 27ರಿಂದ ಆಗಸ್ಟ್ 31ರ ವರೆಗೆ ಎಂದಿರಬೇಕು.'' ಆತ ಹೇಳಿದ ''ಇಲ್ಲ, ಇಲ್ಲ ಸಮ್ಮೇಳನ ಜುಲೈ 27ರಿಂದ 31ಕ್ಕೇನೆ.'' ಮತ್ತೆ ನಾನು ಕೇಳಿದೆ ''ಹಾಗಾದರೆ ನೀನು ವಿನಿಮಯವನ್ನು ಆಗಸ್ಟ್ 22ರಂದು ಏಕೆ ಬಿಡುಗಡೆ ಮಾಡುತ್ತಿದ್ದೀಯೆ ?'' ಆತ ಉತ್ತರಿಸಿದ, ''ಅದು ನನ್ನ ತಪ್ಪಲ್ಲ. ಕಾಗದ ನನ್ನ ಬಳಿಗೆ ಬರಲು ಬಹಳ ಸಮಯ ಹಿಡಿಯುತ್ತದೆ ಮತ್ತೆ ಒಮ್ಮೆ ಅದು ನನ್ನ ಬಳಿ ಬಂದಾದ ಮೇಲೆ ವಿನಿಮಯ ಬಿಡುಗಡೆ ಪತ್ರವನ್ನು ನಾನು ಮಾಡಿ ಕಳುಹಿಸಲೇಬೇಕು. ನನಗೆ ಗೊತ್ತು ಈ ಪತ್ರವನ್ನು ಪಡೆಯುವವ ಶಾಪ ಹಾಕಿ ಬ್ಯಾಂಕಿಗೆ ಒಂದು ಹೀನಾಯವಾದ ಪತ್ರ ಬರೆಯುತ್ತಾನೆ. ಆದರೆ ಆ ಪತ್ರ ಬರುವುದು ನನಗಲ್ಲ, ಬೇರೆ ಯಾರಿಗೋ ಆಗಿರುತ್ತೆ.'' ಅಲ್ಲಿನ ತನ್ನತನದ ಕೊರತೆಯನ್ನ ನೀವು ಕಾಣುತ್ತೀರಿ.

ನಿನ್ನೆ ನನ್ನ ವಿಮಾನ ಎಂಟು ಘಂಟೆ ತಡವಾದದ್ದಕ್ಕೆ ದುರಸ್ತಿ ಸಿಬ್ಬಂದಿಯವರ ತಪ್ಪು ಎಂದು ಚಾಲಕ ಹೇಳಿದ. ಪ್ರಯಾಣಿಕರ ದೃಷ್ಟಿಯಿಂದ ಅವರು ಎಲ್ಲರೂ ಇಂಡಿಯನ್ ಏರ್ ಲೈನ್ಸ್‌ನವರೆ. ಆದರೆ ಯಾವಾಗ ಅವರ ತನ್ನತನ ಕಳೆದುಹೋಗಿರುತ್ತದೊ, ಆಗ ಕೆಲಸಗಾರರು ಈ ಅಂಶವನ್ನು ಪರಿಗಣಿಸದೆ ತಮ್ಮನ್ನ ತಾವು ರಕ್ಷಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ನಾನು ಇಂಡಿಯನ್ ಏರ್ ಲೈನ್ಸ್‌ನ ಒಬ್ಬ ಹಿರಿಯ ಅಧಿಕಾರಿಗೆ ನನ್ನ ವಿಮಾನ ಎಂಟು ಘಂಟೆ ತಡವಾದಾಗಲೂ ಯಾವ ಪ್ರಕಟಣೆಯನ್ನೂ ಏಕೆ ಮಾಡಲಿಲ್ಲ ಎಂದು ಕೇಳಿದಾಗ, ಆತ ''ಇದೇನು ಹೆಚ್ಚಲ್ಲ. ನಿನ್ನೆ ವಿಮಾನ ಹತ್ತು ಘಂಟೆ ತಡವಾಗಿತ್ತು. ಆದರೂ ಯಾವ ಪ್ರಕಟಣೆಯನ್ನೂ ಮಾಡಲಿಲ್ಲ. ನಾವು ಅಂತಹ ವಿಷಯಕ್ಕೆಲ್ಲಾ ಚಿಂತಿಸುವುದೇ ಇಲ್ಲ'' ಎಂದ. ಒಂದು ಪ್ರಕಟಣೆ ಮಾಡಲು ಹೆಚ್ಚು ಶಕ್ತಿ ಬೇಕಿಲ್ಲ. ಆದರೆ ಆ ಶಕ್ತಿಯೂ ಇಲ್ಲವಾಗಿದೆ. ವಿಮಾನ ತಡವಾಗುತ್ತದೆ ಎಂದು ಯಾವನಿಗೆ ತಿಳಿಯುತ್ತದೆಯೊ ಅವನು ಪ್ರಕಟಣೆ ಮಾಡುವವನಿಗೆ ಆ ವಿಷಯ ತಿಳಿಸಿ ಪ್ರಕಟಿಸಲು ಹೇಳಲು ಇಚ್ಛಿಸುವುದಿಲ್ಲ. ಇದು ಚೈತನ್ಯಕ್ಷೀಣತೆಯ ಕಾಯಿಲೆ ಬರುತ್ತಿರುವ ಸೂಚನೆಯಾಗಿದೆ.

ಆದರೆ ಕೇವಲ ತೋರಿಕೆಯ ಶಕ್ತಿ ಮತ್ತು ಜನಗಳ ಸುತ್ತಾಟ ಅವಶ್ಯಕವಾಗಿ ಸಾಧನೆ ಎನಿಸುವುದಿಲ್ಲ. ಶಕ್ತಿಯನ್ನು ಸರಿದಿಕ್ಕಿನಲ್ಲಿ ನಡೆಸಬಹುದು, ನಡೆಸದೇ ಇರಬಹುದು ಅಥವಾ ದಿಶೆತಪ್ಪಿನಡೆಸಬಹುದು. ಅದು ಸರಿ ದಿಶೆಯಲ್ಲಿದ್ದಾಗ ಶಕ್ತಿ ಸಾಧನೆಯಲ್ಲಿ ಪರಿವರ್ತಿತವಾಗುತ್ತದೆ. ಅದು ನಡಸದೇ ಇದ್ದಾಗ ಜನ ಏನೂ ಮಾಡದೇ ಅಲ್ಲಿಂದಿಲ್ಲಿಗೆ ಓಡಾಡುತ್ತಾ ಕೇವಲ ಗೊಂದಲ ಪುನರಾವೃತ್ತಿಯನ್ನು ಸೃಷ್ಟಿಸುತ್ತದೆ. ನಾನು ಸಮ್ಮೇಳನಗಳನ್ನು ನಡೆಸಿದ ಪ್ರತಿಸಾರಿಯೂ, ಇದು ನನಗೆ ಸಮಸ್ಯೆಯಾಗಿದೆ. ನಿಮಗೆ ಬಹಳ ಶಕ್ತಿ ದೊರೆಯುತ್ತದೆ. ಯುವಕರು ಕೆಲಸ ಮಾಡಲು ಉತ್ಸುಕರಾಗಿರುತ್ತಾರೆ, ಆದರೆ ಮಾಡಿದ್ದನ್ನೇ ಮಾಡುವ ಒಂದು ಪ್ರವೃತ್ತಿ ಜನರಲ್ಲಿ ಇದೆ. ಕೊನೆಯಲ್ಲಿ ಇದರಿಂದಾಗಿ ಬಹಳ ಶ್ರಮ ವ್ಯರ್ಥವಾದದ್ದನ್ನು ಕಾಣುತ್ತೀರಿ. ಇದು ಒಂದು ಸಂಸ್ಥೆಯಲ್ಲೂ ಆಗಬಹುದು.

## ದಿಶೆ ತಪ್ಪಿದ ಶಕ್ತಿ

ಮೂರನೆಯದಾಗಿ, ಶಕ್ತಿಯ ದಿಶೆ ತಪ್ಪುವಿಕೆ. ಸಂಸ್ಥೆ ಬೆಳೆದಂತೆಲ್ಲಾ ಜನ ಸಂಸ್ಥೆಗಾಗಿ ಕೆಲಸ ಮಾಡುವುದಿಲ್ಲ. ಸಂಸ್ಥೆಯೊಳಗಿನ ಪ್ರತ್ಯೇಕ ಅಂಕಣಗಳಿಗಾಗಿ ಕೆಲಸ ಮಾಡುತ್ತಾರೆ. ಅದರಿಂದ ಅಂಕಣಗಳ ವ್ಯಾಜ್ಯ ಶುರುವಾಗುತ್ತದೆ. ಮಾರಾಟಕೆ

ವಿರುದ್ಧ ಉತ್ಪಾದನೆ, ಉತ್ಪಾದನೆಯು ವಿರುದ್ಧ ಖರೀದಿ. ಹಣಕಾಸಿನ ವಿರುದ್ಧ ಇತರ ಎಲ್ಲರೂ. ಬಹಳ ಸಂಸ್ಥೆಗಳಲ್ಲಿ ನಡೆಯುವ ವ್ಯಾಜ್ಯಗಳು ಈ ತರಹದವು. ಮತ್ತೆ ಇದರಿಂದಾಗಿ ಕೆಲವು ಕುತೂಹಲಕರ ಸನ್ನಿವೇಶಗಳು ಉದ್ಭವಿಸುತ್ತವೆ. ಮೊನ್ನೆ ನಾನು ಒಬ್ಬ ಮಾರಾಟ ನಿರ್ವಾಹಕನನ್ನು ಕಂಡಿದ್ದೆ. ಸಾಮಾನ್ಯವಾಗಿ ಜಡತೆಯಿಂದ ಕೂಡಿದ ಮನುಷ್ಯ ಅಂದು ಬಹಳ ಸಂತೋಷದಿಂದಿದ್ದ. "ಬಹಳ ಸಂತೋಷದಿಂದಿದ್ದೀಯಾ. ಏನು ನಡೆಯಿತು?" ಎಂದುಕೇಳಿದೆ. ಅವನು ಹೇಳಿದ, "ನಿಮಗೆ ಗೊತ್ತ? ನಮ್ಮ ಕಂಪನಿಯ ಕುದಿಪಾತ್ರೆ (ಬಾಯಿಲರ್) ಒಡೆದಿದೆ. ಇನ್ನು ಎರಡು ತಿಂಗಳ ತನಕ ಉತ್ಪಾದನ ಸಿಬ್ಬಂದಿಯ ಕತೆ ಮುಗಿಯಿತು. ಆತನ ದೃಷ್ಟಿಯಲ್ಲಿ ಅವನ ಮೊದಲ ಶತ್ರು, ಪ್ರತಿಸ್ಪರ್ಧಿ ಕಂಪನಿಯ ಮಾರಾಟಕೆಯಲ್ಲ. ಅದು ತನ್ನ ಕಂಪನಿಯ ಉತ್ಪಾದನೆ. ಇಲ್ಲಿ ನೀವು ಶಕ್ತಿ ದಿಶೆ ತಪ್ಪಿದ್ದನ್ನು ಕಾಣುತ್ತೀರಿ. ಮಾರಾಟ ವಿಭಾಗದ ಒಬ್ಬ ಉತ್ಪಾದನ ಅಂಕಣಕ್ಕೆ ಬಂದಾಗ ಅಲ್ಲಿ ತಕ್ಷಣ ಪಿಸುಮಾತು ಕೇಳಿಸುತ್ತದೆ. "ಅವನು ಇಲ್ಲಿ ವಿಷಯ ಸಂಗ್ರಹಣೆಗೆ ಬಂದಿದ್ದಾನೆ. ಆವನಿಗೆ ಯಾವ ಮಾಹಿತಿಯನ್ನೂ ಕೊಡಬೇಡ. ಅವನು ಎಷ್ಟು ಘಂಟೆಯಾಯಿತು ಎಂದೇನಾದರೂ ಕೇಳಿದರೆ, ಹೇಳಲಿಕ್ಕೆ ಕಷ್ಟ ಎಂದು ಹೇಳು." ಈ ತರಹದ ವ್ಯವಹಾರಗಳು ದಿಶೆ ತಪ್ಪಿದ ಶಕ್ತಿಯನ್ನ ಸೃಷ್ಟಿಸುತ್ತದೆ.

ನಾನು ಅಮೆರಿಕೆಯಲ್ಲಿದ್ದಾಗ, ಥಾಯ್‌ಲ್ಯಾಂಡಿನ ಒಬ್ಬ ಸಹಪಾಠಿಯಿದ್ದ. ಅವನು ಥಾಯ್‌ಲ್ಯಾಂಡಿನಲ್ಲಿ ಏನು ಮಾಡುತ್ತಿದ್ದಾನೆ ಎಂದು ನಾನು ಕೇಳಿದೆ. ತಾನು ಥ್ಯಾಯ್‌ಲ್ಯಾಂಡ್ ನೌಕಾಪಡೆಯಲ್ಲಿ ಇದ್ದೇನೆಂದು ತಿಳಿಸಿ, ಅಲ್ಲಿನ ನೌಕಾಪಡೆಯನ್ನ ವಿವರಿಸಿದ. ಅದು ದೊಡ್ಡ ಪಡೆಯಂತೆ ಕಂಡಿತು. ನಾನು ಹೇಳಿದೆ." "ನೀವು ಶತಮಾನಗಳಿಂದ ಯಾವ ಯುದ್ಧವನ್ನೂ ಮಾಡಿಲ್ಲ, ನಿಮಗೇಕೆ ಅಷ್ಟು ದೊಡ್ಡ ನೌಕಾಪಡೆ ಬೇಕು ?" ಆತ ಹೇಳಿದ "ಏನು ನೀವು ಹೇಳುವುದು ? ನಾವು ಯಾವ ಯುದ್ಧವನ್ನೂ ಮಾಡಿಲ್ಲವೆ ? "ಥಾಯ್‌ಲ್ಯಾಂಡಿನಲ್ಲಿ ನೌಕಾಪಡೆ ಥಾಯ್ ಸೇನೆಯೊಂದಿಗೆ ಯುದ್ಧ ಮಾಡುತ್ತದೆ." ಅಂದರೆ ಅವರಲ್ಲಿ ಪ್ರಬಲ ಸೇನೆಯೂ ಇದೆ ಎಂದಾಯಿತು. ನೀವು ನಗುತ್ತಿರುವಾಗ ನಾನು ಸೂಚಿಸುವುದೇನೆಂದರೆ, ನಿಮ್ಮ ಸಂಸ್ಥೆಯಲ್ಲೇ ಥಾಯ್ ನೌಕಾಪಡೆಗಳು ಮತ್ತು ಥಾಯ್ ಸೇನೆಗಳು ತಮ್ಮ ತಮ್ಮಲ್ಲೇ ಯುದ್ಧ ಮಾಡಲು ತಮ್ಮ ಶಕ್ತಿಯನ್ನು ದಿಕ್ಕು ತಿಗೊಳಿಸುತ್ತಿವೆಯೋ ಎಂದುವಿಚಾರಿಸಿ. ಇದು ನಡೆಯುತ್ತಿದ್ದೆಯೊ, ಇಲ್ಲವೊ ಎಂಬುದು ನಿರ್ವಾಹಕ ಅಲ್ಲಿ ಲಭ್ಯವಿರುವ ಶಕ್ತಿಗಳನ್ನು ಹೇಗೆ ನಿರ್ದೇಶಿಸುತ್ತಿದ್ದಾನೆ ಎಂಬುದರ ಮೇಲೆ ಅವಲಂಬಿತವಾಗಿರುತ್ತದೆ. ಪರಿಪೂರ್ಣ ನಿರ್ವಾಹಕ ಎಂಬುವವನಿಲ್ಲವೇ ಇಲ್ಲ. ಮತ್ತೆ ಯಾವುದೇ ಸ್ವಲ್ಪವಾದರೂ ಅನಿರ್ದೇಶಿತ ಅಥವಾ ತಪ್ಪುನಿರ್ದೇಶಿತ ಶಕ್ತಿ ಇಲ್ಲದಂತಹ ಸಂಸ್ಥೆಯನ್ನ ನಾನು ಇದುವರೆಗೂ ಕಂಡಿಲ್ಲ. ಅದ್ದರಿಂದ ಪರಿಪೂರ್ಣವಾದ ಸಂಸ್ಥೆ ಎಂಬುದೂ ಇಲ್ಲ. ಆದರೆ ಒಂದು ಒಳ್ಳೆಯ ಸಂಸ್ಥೆಯಲ್ಲಿ ಅದರ ಶಕ್ತಿಯು ಹೆಚ್ಚು ಭಾಗ, ನಿಜವಾದ ಗುರಿ ತಲುವುವಲ್ಲಿ ನಿರ್ದೇಶಿತವಾಗಿರುತ್ತದೆ.

## ಪ್ರಾಮುಖ್ಯದ ತಿಳಿವು

ಅಂತಹ ನಿರ್ದೇಶನ ಬಹಳ ಮುಖ್ಯ. ಅದು ತನ್ನತನವನ್ನು ಸೃಷ್ಟಿಸುತ್ತದೆ. ಅದರಿಂದಾಗಿ ಪ್ರಾಮುಖ್ಯವನ್ನು ಸೃಷ್ಟಿಸುತ್ತದೆ. ಪ್ರಾಮುಖ್ಯದ ತಿಳಿವು ಅತಿಮುಖ್ಯ. ಬೆಳಗ್ಗೆ ನಾವು ಅಧಿಕಾರ ಮತ್ತು ಸಂಬಂಧಿತ ವಿಷಯಗಳ ಬಗ್ಗೆ ಮಾತನಾಡಿದ್ದೀದೆ. ಅಧಿಕಾರ ಭ್ರಷ್ಟರನ್ನಾಗಿ ಮಾಡುತ್ತದೆ ಮತ್ತು ಸಂಪೂರ್ಣ ಅಧಿಕಾರ ಸಂಪೂರ್ಣ ಭ್ರಷ್ಟರನ್ನಾಗಿ ಮಾಡುತ್ತದೆ ಎಂಬ ಮಾತನ್ನು ನೀವೆಲ್ಲಾ ಕೇಳಿದ್ದೀರಿ. ನೀವು ಯೋಚನೆ ಮಾಡಲು ನಾನು ಇನ್ನೊಂದು ವಾಕ್ಯವನ್ನು ಕೊಡುತ್ತೇನೆ. ಅಧಿಕಾರಹೀನತೆ ಸವೆತವನ್ನು ಉಂಟುಮಾಡುತ್ತದೆ ಮತ್ತು ಸಂಪೂರ್ಣ ಅಧಿಕಾರಹೀನತೆ ಸಂಪೂರ್ಣ ಸವೆತವನ್ನು ಉಂಟು ಮಾಡುತ್ತದೆ. ಒಂದು ಸಂಸ್ಥೆಯಲ್ಲಿನ ಜನರಿಗೆ ತಾವು ಕಂಡುಕೊಂಡದ್ದನ್ನು ಅಥವಾ ತಾವು ನೋಡಿದುದನ್ನು ಏನೂ ಬದಲಾಯಿಸಲು ಸಾಧ್ಯವಿಲ್ಲ ಎನಿಸಿದರೆ, ಅವರು ನಿಜವಾಗಿಯೂ ಅದರ ಬಗ್ಗೆ ಏನೂ ಮಾಡಲು ಸಾಧ್ಯವಿಲ್ಲ. ಪ್ರೇರಣೆ ಉಂಟುಮಾಡುವುದರಲ್ಲಿ ಅಸಹಾಯಕತೆ ಒಂದು ಬಹಳ ದೊಡ್ಡ ಪ್ರತಿಕೂಲ ಅಂಶ. ಒಬ್ಬ ಮನುಷ್ಯನಿಗೆ ಕೆಲಸ ಮಾಡಲು ತನ್ನಲ್ಲಿ ಸಾಮರ್ಥ್ಯ ಇದೆ ಅನಿಸಿದಾಗ ಆತ ಪ್ರೇರಿತನಾಗುತ್ತಾನೆ. ಉದಾಹರಣೆಗೆ, ಜಮ್‌ಶಡ್‌ಪುರದಲ್ಲಿ ನಾನು ಒಬ್ಬ ಕೆಲಸಗಾರನನ್ನು ಕೇಳಿದೆ, "ಟಿಸ್ಕೊನಲ್ಲಿ ಏನಾದರೂ ತಪ್ಪಾಗುತ್ತಿದ್ದದ್ದನ್ನು ಕಂಡರೆ ನೀನು ಏನು ಮಾಡುತ್ತೀಯ ?" ಅವನು ಮೇಲಧಿಕಾರಿಯ ಬಳಿಗೆ ಹೋಗುವುದಾಗಿ ಹೇಳಿದ. "ಆತ ನಿನ್ನ ಮಾತನ್ನ ಕೇಳದಿದ್ದರೆ?" "ನಾನು ಅವನ ಮೇಲಧಿಕಾರಿಗೆ ಹೇಳುತ್ತೇನೆ" ಮತ್ತೆ ಆ ಎಲ್ಲಾ ಅಧಿಕಾರಿಗಳೂ ನಿನ್ನ ಮಾತನ್ನ ಕೇಳದಿದ್ದರೆ ? "ನಾನು ರೂಸಿ ಭಾಯಿಯವರಲ್ಲಿಗೆ ಹೋಗುತ್ತೇನೆ. ಅವರು ಕೇಳುತ್ತಾರೆ ಎಂದು ನನಗೆ ಗೊತ್ತು." ರೂಸಿಮೋದಿ, ಕಂಪನಿಯ ಅಧ್ಯಕ್ಷ ತನ್ನ ಮಾತನ್ನ ಕೇಳುತ್ತಾರೆ. ಇದು ಟಿಸ್ಕೊವಿನ ಎಲ್ಲ ಕೆಲಸಗಾರರ ನಂಬಿಕೆ. ಅಂದರೆ ಪ್ರತಿ ದಿವಸ ಒಂದು ದರ್ಬಾರು ಅಥವಾ ಜಾತ್ರೆ ಸೇರುತ್ತದೆ ಎಂದಲ್ಲ. ಟಿಸ್ಕೊವಿನ 60,000 ಕೆಲಸಗಾರರಲ್ಲಿ ವರ್ಷದಲ್ಲಿ ಒಂದೆರವತ್ತು ಜನ ರೂಸಿ ಮೋದಿಯವರನ್ನ ಖುದ್ದಾಗಿ ಕಾಣುತ್ತಾರೆ. ಆದರೆ ಪ್ರತಿ ಕೆಲಸಗಾರನಿಗೂ ತಾನು ಯಾವಾಗ ಬೇಕೆಂದರೆ ಆಗ ಅವರನ್ನ ಕಾಣಬಹುದು ಎಂದು ಗೊತ್ತು. ಅದು ಮುಖ್ಯ. ಅದು ಒಂದು ತನ್ನ ಅಧಿಕಾರದ ಅರಿವು.

ಅಧಿಕಾರದ ಅರಿವಿರದ ಸಂಸ್ಥೆಗಳು ಬಹಳಷ್ಟಿವೆ. ಅಲ್ಲಿನ ಕೆಲಸಗಾರ 'ತನ್ನಿಂದ ಏನೂ ಮಾಡಲು ಸಾಧ್ಯವಿಲ್ಲ ಎಂದು ಭಾವಿಸುತ್ತಾನೆ' "ಏನೂ ಸರಿಯಲ್ಲ ಎಂದು ನನಗೆ ಗೊತ್ತು. ಆದರೆ ನನ್ನಿಂದೇನು ಮಾಡಲು ಸಾಧ್ಯ? ನಾನು ತೀರ ಸಣ್ಣವನು." ಈ ರೀತಿ ತನ್ನನ್ನು ಸಣ್ಣವನೆಂದವನು ಕೆಲಸಗಾರ ಅಥವಾ ಮೇಲ್ವಿಚಾರಕನಲ್ಲ. "ನನ್ನ ಸ್ತರದಲ್ಲಿ ನಾನು ಏನೂ ಮಾಡಲು ಸಾಧ್ಯವಿಲ್ಲ" ಈ ಮಾತನ್ನು ನಿರ್ವಾಹಕರು, ಹಿರಿಯ ನಿರ್ವಾಹಕರು ಹೇಳುವುದನ್ನು ಕೇಳಿದ್ದೇನೆ. ಇಲ್ಲಿ ನಿಮಗೆ ಈ ಭಾವನೆ ಸಾಧನೆಯ ಮೇಲೆ ಹೇಗೆ ಪ್ರತಿಕೂಲ ಪರಿಣಾಮವಾಗುತ್ತದೆ ಎಂಬುದನ್ನು ಕಾಣುತ್ತೀರಿ. ಎಲ್ಲೆಲ್ಲಿ ಜನರಿಗೆ ಅವರು ಏನಾದರೂ ತಪ್ಪು ಕಂಡಾಗ ನೀವು ಅದಕ್ಕಾಗಿ ಹೋರಾಡಲು ಸಿದ್ಧ ಎಂಬ ನಂಬಿಕೆ ಇರುತ್ತದೆಯೊ ಅವರಿಂದ ನೀವು ಬಹಳ ಸಾಧನೆಯನ್ನು ಪಡೆಯಬಹುದು. ಇದು ನೀವು ನಿಮ್ಮ ಕೈಕೆಳಗಿನವರಲ್ಲಿ ಉಂಟುಮಾಡಬಹುದಾದ ಒಂದು ಮುಖ್ಯ ಅನಿಸಿಕೆ. ಇಲ್ಲಿ ಶಕ್ತಿ ನಿರ್ದೇಶಿತವಾಗುತ್ತದೆ.

## ವಿಕಾಸದ ಅರಿವು

ಸಾಧನೆಗೆ ಪೂರಕವಾಗುವ ಅಂತಿಮ ಮುಖ್ಯ ಅಂಶವೆಂದರೆ ಬೆಳವಣಿಗೆಯ ಅರಿವು. ಈ ದಿನಗಳಲ್ಲಿ ಯುವಕರು ಬಹಳ ಮಹತ್ವಾಕಾಂಕ್ಷೆಯುಳ್ಳವರು. ಪ್ರತಿಯೊಬ್ಬನೂ ಚೇರ್‌ಮನ್ನನೊ, ವ್ಯವಸ್ಥಾಪಕ ನಿರ್ದೇಶಕನೊ ಅಥವಾ ಎರಡೂ ಆಗಲಿಚ್ಛಿಸುತ್ತಾನೆ. ಆದರೆ ಈ ಕಂಪನಿಯಲ್ಲಿ ಒಬ್ಬನೇ ಆಗಲು ಸಾಧ್ಯ ಎಂಬುದನ್ನು ಯೋಚಿಸುವುದಿಲ್ಲ. ಅವರಲ್ಲಿ ಬಹಳ ಮಂದಿ ಹೇಳುತ್ತಾರೆ – ಈ ಕಂಪನಿಯಲ್ಲಿ ನನಗೆ ಅವಕಾಶ ಕೊಡದಿದ್ದರೆ ನಾನು ಬೇರೆ ಕಂಪನಿಗೆ ಹೋಗುತ್ತೇನೆ ಎಂದು. ಇದರಿಂದಾಗಿ ನಿಮಗೆ ಹೆಚ್ಚು ಕಲಿಯಲು, ಬೆಳೆಯಲು ಪ್ರೇರಣೆ ಸಿಕ್ಕುತ್ತದೆ. ಅಲ್ಲಿ ಬೆಳೆಯಬೇಕೆಂಬ ಪ್ರೇರಣೆ ಕಂಪನಿಗೆ ಸಹಾಯ ಮಾಡಬೇಕೆಂಬ ಉದ್ದೇಶದಿಂದಲ್ಲ. ಇಲ್ಲಿನ ಭಾವನೆ ನಾನು ಬೆಳೆಯಬೇಕು. ಏಕೆಂದರೆ ನಾನು ಒಂದು ಕೆಲಸವನ್ನು ಕಂಡುಕೊಳ್ಳಬಹುದು. ಈ ಭಾವನೆ ಬಹಳ ಪ್ರಭಾವವಾಗಿರುವುದನ್ನು ನಾನು ಹಿಂದೂಸ್ಥಾನ್ ಲೀವರ್‌ನಲ್ಲಿ ಕಂಡಿದ್ದೇನೆ. ಪ್ರತಿ ಸಲ ಒಬ್ಬ ನಿರ್ದೇಶಕನನ್ನು ಚೇರ್‌ಮನ್ ಆಗಿ ಉತ್ತೀರ್ಣ ಮಾಡಿದಾಗ ಇತರ ಇಬ್ಬರು ನಿರ್ದೇಶಕರು ಕಂಪನಿ ಬಿಡುತ್ತಾರೆ. ಅವರು ಟನ್‌ಡನ್‌ರನ್ನು ಚೇರ್‌ಮನ್ ಆಗಿ ಮಾಡಿದರು. ದಾಸು ಮತ್ತು ಜಾಂಡಿ ಕಂಪನಿ ಬಿಟ್ಟರು. ಅವರು ಥಾಮಸ್‌ನ್ನ ಚೇರ್‌ಮನ್ ಮಾಡಿದರು ಮಥಾಯಿಸ್ ಮತ್ತು ವರದರಾಜನ್ ಬಿಟ್ಟರು. ಮೂರು ವರ್ಷಗಳ ಕೆಳಗೆ ಅವರು ಗಂಗೂಲಿಯನ್ನು ಚೇರ್‌ಮನ್ ಮಾಡಿದರು. ಮೂರು ಜನ ಬಿಟ್ಟರು. ಬ್ಯಾನರ್ಜಿ, ಭಜಾವತ್ ಮತ್ತು ಚೋಪ್ರ. ಬಿಟ್ಟವರೆಲ್ಲ ಬೇರೆ ಬೇರೆ ಕಡೆ ಚೇರ್‌ಮನ್ ಅಥವಾ ವೈಸ್ ಚೇರ್‌ಮನ್ ಆಗಿ ಸೇರಿಕೊಂಡರು. ಇದು ಒಂದು ಉತ್ತಮ ಪ್ರೇರಕವಾಗಿ ಕೆಳಸ್ತರದವರೆಗೂ ಸಾಧನೆಯನ್ನು ಸೃಷ್ಟಿಸುವಂತಹ ಅಂಶ ಎಂದು ನನಗನ್ನಿಸುತ್ತದೆ. ಏಕೆಂದರೆ ಇದು ಒಬ್ಬ ನಿರ್ವಾಹಕನನ್ನು ನಿರ್ದೇಶಕನನ್ನಾಗಿ

ಉತ್ತೀರ್ಣ ಮಾಡಿದಾಗಲೂ ಆಗುತ್ತದೆ. ಇನ್ನೊಬ್ಬ ನಿರ್ವಾಹಕ ಕಂಪನಿಯನ್ನು ಬಿಟ್ಟುಹೋಗುತ್ತಾನೆ. ಇದು ಕೆಳಸ್ತರದವರವಿಗೂ ಹೀಗೇ ನಡೆಯುತ್ತದೆ. ನಾನು ನನ್ನನ್ನ ಬೆಳಸಿಕೊಂಡರೆ ನಾನು ನನ್ನ ವರ್ಗಾವಣೆ ಮೌಲ್ಯವನ್ನ ಬೆಳೆಸಿಕೊಳ್ಳಬಹುದು. ಮತ್ತೆ ನನಗೆ ಯಾವಾಗ ಏನು ಬೇಕೊ ಅದನ್ನ ಪಡೆಯಬಹುದು. ನಾನು ಈ ಕಂಪನಿಯಲ್ಲಿ ಚೇರ್‌ಮನ್ ಆಗಲು ಸಾಧ್ಯವಿದ್ದರೆ ಇಲ್ಲೇ ಉಳಿಯುತ್ತೇನೆ. ಇಲ್ಲದಿದ್ದರೆ ನಾನು ಬೇರೆ ಕಂಪನಿ ಸೇರಿ ಅಲ್ಲಿ ಚೇರ್‌ಮನ್ನನಾಗಲು ಸಿದ್ಧ ಎನ್ನುತ್ತಾನೆ. ನಾನು ಇಂತಹ ತಿಳಿವಳಿಕೆಯ ಬಗ್ಗೆ, ಬೆಳವಣಿಗೆಯ ತಿಳುವಳಿಕೆಯ ಬಗ್ಗೆ ಹೇಳುತ್ತಿದ್ದೇನೆ.

## ವರ್ಗಾವಣೆ ಮೌಲ್ಯ

ಇನ್ನೊಂದು ತಡೆ, ತಾವು ಏನೇ ಆಗಿರಲಿ ಏನೇ ಮಾಡಲಿ, ಯಾರೂ ತಮ್ಮನ್ನು ಗುರುತಿಸುವುದಿಲ್ಲ ಎಂಬ ಭಾವನೆಯುಳ್ಳ ಜನಗಳಿರುವ ಕಂಪನಿಗಳನ್ನ ನೋಡಿದ್ದೇನೆ. ಅವನು ತಮ್ಮ ವರ್ಗಾವಣೆ ಮೌಲ್ಯವನ್ನ ಬೆಳೆಸಿಕೊಂಡಿಲ್ಲ. ಮೊನ್ನೆ ಒಂದು ಸರ್ಕಾರಿ ವಲಯದ ಗೊಬ್ಬರ ಕಾರ್ಖಾನೆಯಲ್ಲಿ ತಾನು ಮಾಡುತ್ತಿರುವ ಕೆಲಸಕ್ಕೆ ಖಾಸಗಿ ವಲಯದಲ್ಲಿ ಈಗ ಬರುವ ಸಂಬಳದ ಎರಡರಷ್ಟು ತನಗೆ ಸಂಬಳ ಸಿಕ್ಕುತ್ತದೆ ಎಂದು ಒಬ್ಬರು ಹೇಳಿದರು. ''ಹಾಗಿದ್ದರೆ ನೀನೇಕೆ ಖಾಸಗಿ ವಲಯ ಸೇರುವುದಿಲ್ಲ ?'' ಎಂದು ಕೇಳಿದೆ. ''ನನಗೆ ಇಲ್ಲಿ ಸಿಕ್ಕುತ್ತಿರುವ ಸಂಬಳದಲ್ಲಿ ಅರ್ಧದಷ್ಟಾದರೂ ಯಾರು ಕೊಡುತ್ತಾರೆ ?'' ಎಂದ. ಅದು ವಿಚಿತ್ರ ಗಣಿತ ಆದರೂ ಸತ್ಯ. ನಿಜವಾಗಲೂ ಆತ ಏನು ಹೇಳುತ್ತಿದ್ದ ಅಂದರೆ, ಅವನ ಕೊಡುಗೆ ಮೌಲ್ಯ ಚೆನ್ನಾಗಿದೆ. ಅವನು ಇರುವಲ್ಲಿ ಅವನು ಚೆನ್ನಾಗಿ ಕೆಲಸ ಮಾಡುತ್ತಿದ್ದಾನೆ. ಖಾಸಗಿ ಕ್ಷೇತ್ರದ ಸಂಬಳದ ಅಳತೆ ಪ್ರಕಾರ ಅವನಿಗೆ ಸಿಕ್ಕುತ್ತಿರುವುದಕ್ಕಿಂತ ಎರಡರಷ್ಟು ಅವನ ಬೆಲೆ ಇದೆ ಎಂದು. ಆದರೆ ವರ್ಗಾವಣೆ ಮೌಲ್ಯ ತೆಗೆದುಕೊಂಡರೆ ಅವನು ಮಾರುಕಟ್ಟೆಯಲ್ಲಿ ಕೆಲಸ ಹುಡುಕಲು ಹೋದಾಗ ಅವನ ಬೆಲೆ ಕಡಿಮೆ ಎಂದು. ಅವನು ಸಹಜವಾಗಿ ಇದಕ್ಕೆ ತನ್ನ ಪರಿಸ್ಥಿತಿಯನ್ನು ದೂಷಿಸುತ್ತಾನೆ. ಗೊಬ್ಬರ ಒಂದು ಸಣ್ಣ ಕೈಗಾರಿಕೆ. ಅಲ್ಲಿ ಹೆಚ್ಚಿಗೆ ಘಟಕಗಳಿಲ್ಲ ಎಂದು.

ಅಲ್ಲಿ ಕೂಡ ನಾನು ಒಂದು ಕುತೂಹಲವಾದ ನಿರ್ದೇಶನವನ್ನು ಕೊಡಬಲ್ಲೆ. ತಿರುಚಿಯ ಬಿ ಎಚ್ ಇ ಎಲ್ ಅವರ ಎಲ್ಲಾ ಘಟಕಗಳಲ್ಲೂ ಅಲ್ಲ, ಕೇವಲ ಒಂದು ಕಾರ್ಖಾನೆ 23 ಚೇರ್‌ಮನ್‌ಗಳು/ವ್ಯವಸ್ಥಾಪಕ ನಿರ್ದೇಶಕರನ್ನು ಅಥವಾ ಅನಂತರದ ಅಧಿಕಾರಿಗಳನ್ನ ಕೊಟ್ಟಿದೆ. ತಮ್ಮ ತಾಂತ್ರಿಕ ಕ್ಷೇತ್ರವಲ್ಲದೆ ಬೇರೆ ಕ್ಷೇತ್ರಗಳಲ್ಲೂ ಸಹ. ಶ್ರೀ ದೀನದಯಾಳು ತಿರುಚಿಯಲ್ಲಿ ಕಾರ್ಯನಿರ್ವಾಹಕ ನಿರ್ದೇಶಕರಾಗಿದ್ದರು. ಈಗ ಅವರು ಮದ್ರಾಸ್ ರಿಫೈನರಿಯಲ್ಲಿ ಚೇರ್‌ಮನ್ ಮತ್ತು ವ್ಯ. ನಿ. ಆಗಿದ್ದಾರೆ. ತಮ್ಮ ಬಾಯಿಲರ್ ತಾಂತ್ರಿಕತೆಯನ್ನ ಬಿಟ್ಟು, ಬೇರೆಯೇ ತಾಂತ್ರಿಕತೆಗೆ ಹೋಗಿದ್ದಾರೆ. ಇದೇಕಾಯಿತೆಂದರೆ ಹೇಗೂ ತಿರುಚಿಯ ಘಟಕ ಸತತವಾಗಿ ಶ್ರೇಷ್ಠವಾಗಿ ಹೆಚ್ಚಿನ ವರ್ಗಾವಣೆ ಮೌಲ್ಯವನ್ನು ಸೃಷ್ಟಿಸುತ್ತಾ ಬಂದಿದೆ. ಆದ್ದರಿಂದ ಈ ವರ್ಗಾವಣೆ ಮೌಲ್ಯ ಖಾಸಗಿ ಕ್ಷೇತ್ರದಲ್ಲಿದ್ದದ್ದರಿಂದಾಗಲಿ ಸರಕಾರಿ ಕ್ಷೇತ್ರದಲ್ಲಿದ್ದದ್ದರಿಂದಾಗಲಿ ಬಂದದ್ದಲ್ಲ. ಅದು ಮುಖ್ಯವಾಗಿ, ಒಂದು ಸಂಸ್ಥೆಯಲ್ಲಿ ಪ್ರತಿಯೊಬ್ಬನಲ್ಲೂ ನಾನು ಬೆಳೆಯುತ್ತಿದ್ದೇನೆ, ನಾನು ಅಭಿವೃದ್ಧಿ ಹೊಂದುತ್ತಿದ್ದೇನೆ, ನಾನು ಯಾವುದೇ ಸಂದರ್ಶನಕ್ಕೆ ಹೋಗಿ ಅಲ್ಲಿ ಬಾಯಿಲರ್‌ಗಳನ್ನ ತಯಾರಿಸುವುದರಲ್ಲಿ ಮಾತ್ರವಲ್ಲ. ನಿಮಗೆ ಬೇಕಾದ ಯಾವುದೇ ವಸ್ತುವನ್ನು ತಯಾರಿಸುವುದರಲ್ಲಿ ನನ್ನ ಬೆಲೆ ಏನು ಎಂದು ಸಿದ್ಧಪಡಿಸಬಲ್ಲೆ ಎಂಬ ಒಂದು ಭಾವನೆ ಉಂಟುಮಾಡುವ ವಾತಾವರಣ. ನಾನು ಒಬ್ಬ ನಿರ್ವಾಹಕ. ನಾನು ಸಾಧನೆಯನ್ನು ಪಡೆಯಬಲ್ಲೆ. ಈ ಒಂದು ಕಾರ್ಯಕ್ಷಮತೆಯ ಬಗ್ಗೆ ಜನರ ವಿಶ್ವಾಸ ಉಂಟಾದರೆ, ಅದೇ ಒಂದು ಪ್ರೇರಕ ಅಂಶವಾಗುತ್ತದೆ ಮತ್ತು ಅದು ಸಾಧನೆಯನ್ನು ಬೆಳೆಸುತ್ತದೆ.

ಆದ್ದರಿಂದ ನೀವು ಕಂಡಂತೆ, ಭಯ ಮತ್ತು ಹಣವನ್ನು ಕಿಟಕಿಯಿಂದಾಚೆಗೆ ಎಸೆದ ಮೇಲೆ, ನಾವು ಸೃಷ್ಟಿಮಾಡಬಹುದಾದ ಮೂರು ಶ್ರೇಷ್ಠ ಸಾಧಕಗಳೆಂದರೆ ತನ್ನತನದ ಅರಿವು, ಪ್ರಾಮುಖ್ಯದ ಅರಿವು ಮತ್ತು ಬೆಳವಣಿಗೆಯ ಅರಿವು.

## ಸಾಧನಾ ವಿಶ್ಲೇಷಣೆ

ನಾನು ಕೊನೆಯದಾಗಿ ಇಲ್ಲಿ ವಿಚಾರ ಮಾಡಬಯಸುವ ವಿಷಯವೆಂದರೆ ಸಾಧನಾ ವಿಮರ್ಶೆ. ನನಗೆ ನೆನಪಿದೆ, ನಾನು ಒಂದು ಬಹುರಾಷ್ಟ್ರ ಸಹಾಯಕ ಸಂಸ್ಥೆಯಲ್ಲಿ ಕೆಲಸ ಮಾಡುತ್ತಿದ್ದಾಗ ಸಾಧನಾ ವಿಮರ್ಶೆ ಒಂದು ಉತ್ಕೃಷ್ಟ ನವೀನ ಕಾರ್ಯ ಎಂದು ಭಾವಿಸಲಾಗುತ್ತಿತ್ತು. ನೀವು ಒಂದು ಅತ್ಯಾಧುನಿಕ ಸಂಸ್ಥೆಯಾದರೆ ನಿಮ್ಮಲ್ಲಿ ಒಂದು ಉತ್ತಮ ಸಾಧನ ವಿಮರ್ಶೆ ಇರಲೇಬೇಕು. ಆದ್ದರಿಂದ ಬಹಳಷ್ಟು ನಮೂನೆಗಳು ರಚಿತವಾದುವು. ಮೊದಲು ಅದು ಎರಡು ಪುಟ, ಅನಂತರ ಅದು ನಾಲ್ಕು ಪುಟ, ಆರು ಪುಟ, ಎಂಟು ಪುಟಗಳಾಗಿ ಮತ್ತೆ ಎರಡು ಪುಟಕ್ಕೇ ಬಂತು. ಹೀಗೆ ನಡೆಯುತ್ತಿತ್ತು. ಪ್ರತಿ ಮೂರು ವರ್ಷ ಕಂಪನಿ ಒಬ್ಬ ಹೊಸ ಸಲಹೆಗಾರನನ್ನು ಕರೆಯುತ್ತಿತ್ತು. ಮತ್ತು ಅವನು ಒಂದು ಹೊಸ ನಮೂನೆ ಪತ್ರವನ್ನ ಯೋಜಿಸುತ್ತಿದ್ದ.

ಸಾಧನಾ ವಿಮರ್ಶೆ ಕೇವಲ ಕೆಲವೇ ಕಂಪನಿಗಳಲ್ಲಿ ಉಪಯುಕ್ತವಾದದ್ದನ್ನು ನಾನು ಕಂಡಿದ್ದೇನೆ. ಬಹಳ ಕಂಪನಿಗಳಲ್ಲಿ ಅದೇ ತೊಂದರೆಯನ್ನುಂಟುಮಾಡಿದೆ. ಸರಕಾರದಲ್ಲಿ ಸಾಧನಾವಿಮರ್ಶೆ ಬಹಳ ವರ್ಷಗಳಿಂದ ಇದೆ. ಈಸ್ಟ್ ಇಂಡಿಯಾ ಕಂಪನಿಯ ಕಾಲದಲ್ಲಿ ಅದನ್ನು ಸಿ.ಆರ್. ಎನ್ನುತ್ತಿದ್ದರು. ಅಂದರೆ ಕಾನ್‌ಫಿಡೆನ್‌ಶಿಯಲ್ ರೋಲ್ ಎನ್ನುವ ಪದವನ್ನು ಏಕೆ ಉಪಯೋಗಿಸುತ್ತಿದ್ದರೆಂದರೆ, ಆಗಿನ ಕಾಲದಲ್ಲಿ ಕಾಗದವನ್ನು ಮಡಿಸಲಾಗುತ್ತಿರಲಿಲ್ಲ, ಅದು ಬಿರುಕು ಬಿಡುತ್ತಿತ್ತು. ಆದ್ದರಿಂದ ಅದನ್ನ ಸುರುಳಿ ಸುತ್ತಿ, ಕಂಪನಿಯ ನಿರ್ದೇಶಕನ ಕಛೇರಿಯಲ್ಲಿ ಇಡಲಾಗುತ್ತಿತ್ತು. ಪ್ರತಿ ವರ್ಷ ಒಬ್ಬ ವ್ಯಕ್ತಿಯ ಗೋಪ್ಯ ಸುರುಳಿಯನ್ನು ಬರೆದು ಅದನ್ನು ಕಛೇರಿಯ ಮೂಲ ಸುರುಳಿಗೆ ಲಗತ್ತಿಸಿ ಉದ್ದ ಮಾಡಲು ಕಳುಹಿಸುತ್ತಿದ್ದರು.

ಆ ಪದ್ಧತಿ ಇಂದಿಗೂ ನಡೆದಿದೆ. ಆದರೆ ಅದರಲ್ಲಿ ಯಾವ ವಿಶ್ವಾಸವೂ ಇಲ್ಲ. ಕೇವಲ ಕೆಲವೇ ಸಂಸ್ಥೆಗಳಲ್ಲಿ ಸಾಧನಾ ವಿಮರ್ಶೆ ವಿಶ್ವಾಸಾರ್ಹವಾಗಿ ನಡೆಯುತ್ತಿದೆ ಎಂಬ ಭಾವನೆ ಅಲ್ಲಿನ ಜನರಲ್ಲಿದೆ ಎರಡು ಸಾವಿರ ವರ್ಷಗಳ ಹಿಂದೆ ಕನ್‌ಫ್ಯೂಷಿಯಸ್. ಹೇಳಿದ—ಸರಕಾರ ಮೂರು ವಸ್ತುಗಳನ್ನು ಅವಲಂಬಿಸಿದೆ : ತುಪಾಕಿ, ಅಕ್ಕಿ ಮತ್ತು ನಿಷ್ಠೆ. ಈ ಮೂರರಲ್ಲಿ ಮುಖ್ಯವಾದದ್ದು ನಿಷ್ಠೆ.

ಆಧುನಿಕ ನಿರ್ವಹಣ ಭಾಷೆಯಲ್ಲಿ ಹೇಳುವುದಾದರೆ, ನಾನು ಹೀಗೆ ಹೇಳುತ್ತೇನೆ : ಪ್ರತಿಯೊಂದು ಆಧುನಿಕ ನಿರ್ವಹಣೆ ಮೂರು ವಸ್ತುವನ್ನು ಅವಲಂಬಿಸಿದೆ. ಪ್ರತಿಫಲ ನೀಡುವ ಸಾಮರ್ಥ್ಯ, ಶಿಕ್ಷೆ ವಿಧಿಸುವ ಸಾಮರ್ಥ್ಯ ಮತ್ತು ವಿಶ್ವಾಸಾರ್ಹತೆ. ಅದರಲ್ಲಿ ಮುಖ್ಯವಾದದ್ದು ವಿಶ್ವಾಸಾರ್ಹತೆ. ಈ ವಿಶ್ವಾಸಾರ್ಹತೆ ಕಳೆದುಕೊಂಡರೆ ಸಾಧನಾ ವಿಮರ್ಶೆ ಪದ್ಧತಿ ಅರ್ಥಹೀನವಾಗುತ್ತದೆ. ಕಾರ್ಮಿಕ ಸಂಘಗಳೊಡನೆ ಸಂಧಾನ ನಡೆಸುವಾಗ, ನಿರ್ವಾಹಕರು ಸಾಧನಾ ವಿಮರ್ಶೆಯನ್ನು, ವೇತನ ವೃದ್ಧಿಗಾಗಿಯಾಗಲಿ, ಪದೋನ್ನತಿಗಾಗಲಿ ಇನ್ನಾವುದಕ್ಕಾಗಲಿ ಉಪಯೋಗಿಸಿಕೊಳ್ಳುವುದಿಲ್ಲ ಎಂದು ಒಪ್ಪಿಕೊಂಡಂತಹ ಹಲವು ಸನ್ನಿವೇಶಗಳು ನನಗೆ ಗೊತ್ತು. ಅಂದರೆ ಅವರು ನಮಗೆ ವಿಮರ್ಶೆ ಮಾಡುವ ಅಧಿಕಾರ ಇರುವುದರಿಂದ ನಾವು ವಿಮರ್ಶೆ ಮಾಡುತ್ತೇವೆ ಎಂದು ಹೇಳುತ್ತಾರೆ. ಸಾಧನಾ ವಿಮರ್ಶೆಯನ್ನು ಈ ಅವಸ್ಥೆಗೆ ತಂದದ್ದಾದರೆ ಅದಕ್ಕೆ ಏನೂ ಬೆಲೆ ಉಳಿಯುವುದಿಲ್ಲ. ಅದೊಂದು ನಿರರ್ಥಕ ಆಚರಣೆಯಾಗುತ್ತದೆ.

ಆದರೆ ಇದು ಎಲ್ಲಿ ನಡೆಯಲು ಸಾಧ್ಯವೋ ಅಲ್ಲಿ ಇದು ಏನನ್ನು ಸಾಧಿಸಬಲ್ಲದು ಎಂಬುದನ್ನೂ ಕಂಡಿದ್ದೇನೆ. ವಾಸ್ತವವಾಗಿ, ಒಂದು ಸಾಧನಾ ಪದ್ಧತಿ ಸಾಧನೆಯ ವಿಮರ್ಶೆ ಮಾಡದೆ, ಸಾಧನೆಯನ್ನೆ ಉತ್ತಮವಾಗಿಸುವುದಕ್ಕೆ ಉಪಯೋಗಿಸಿದಾಗ ಅದು ಚೆನ್ನಾಗಿ ಕೆಲಸಮಾಡುತ್ತದೆ. ಏಕೆಂದರೆ ಜನ ತಮ್ಮ ಸಾಧನೆಯನ್ನು ಉತ್ತಮಗೊಳಿಸಿಕೊಳ್ಳಲು ಇಚ್ಛೆಯುಳ್ಳವರಾಗಿದ್ದಾರೆ. ನೀವು ಅವರನ್ನು ಇತರರೊಡನೆ ಹೋಲಿಸಿ, ನಿನಗೆ D ಮತ್ತು ಬೇರೊಬ್ಬನಿಗೆ B ಮತ್ತು ಮತ್ತೊಬ್ಬನಿಗೆ A ಎಂದಾಗ, ಅವರು ಬೇದಗೊಳ್ಳುತ್ತಾರೆ. ಅದರ ಬದಲು ನೀವು ''ನಿನ್ನ ಸಾಧನೆಯನ್ನು ಬರುವ ವರ್ಷ

ಉತ್ತಮಗೊಳಿಸಲು ಸಾಧ್ಯವೇ ?'' ಎಂದರ ಅವರು ಸಹಜವಾಗಿ ಆಗಲಿ, ಆದರೆ ಏನ್ನುತ್ತಾರೆ. ಅವರು ಆಗ ಹೇಳುವ ವಿಷಯ ಮುಖ್ಯವಾದದ್ದು. ಏಕೆಂದರೆ, ಎಲ್ಲರ ಸಾಧನೆ ಎರಡು ಅಂಶಗಳಿಂದ ಪ್ರಭಾವಿತವಾಗಿರುತ್ತದೆ. ಒಂದು ಸಂಸ್ಥೆಯಿಂದ ದೊರೆತ ಸಹಾಯ, ಮತ್ತೊಂದು ವೈಯಕ್ತಿಕ ಶ್ರಮ.

ಈಗ ಅವರು ಸಹಜವಾಗಿ ಸಂಸ್ಥೆಯಿಂದ ದೊರಕಿದ ಸಹಾಯ ಸಾಲದ್ದರಿಂದ, ಅಪೂರ್ಣವಾದ್ದರಿಂದ ತಮ್ಮ ಸಾಧನೆ ನಿರೀಕ್ಷಿಸಿದಷ್ಟಾಗಲಿಲ್ಲ ಎಂದು ಭಾವಿಸುತ್ತಾರೆ. ಎಲ್ಲೆಲ್ಲಿ ಮೇಲಧಿಕಾರಿ, "ಸಹಾಯ ನೀಡುವುದರ ಬಗ್ಗೆ ಏನು ಮಾಡಲು ಸಾಧ್ಯ ಎಂಬುದನ್ನು ನಾನು ಪರೀಕ್ಷಿಸುತ್ತೇನೆ. ಆದರೆ ನೀನು ಏನು ಮಾಡಲು ಸಾಧ್ಯ ಎಂಬುದನ್ನು ನೋಡೋಣ, ಏಕೆಂದರೆ ಅದೂ ಒಂದು ಪ್ರಮುಖ ಅಂಶ. "ಮತ್ತೆ ಈ ಮಾತನ್ನು ಹೇಳಿ ಸಹಾಯ ಒದಗಿಸಲು ಸಾಧನಾ ಪದ್ಧತಿಯನ್ನು ನಿರ್ದೇಶಿಸುತ್ತಾನೊ, ಅಲ್ಲಿ ಆ ಪದ್ಧತಿ ವಿಶ್ವಾಸಾರ್ಹವಾಗುತ್ತದೆ. ಆಗ ಆ ವ್ಯಕ್ತಿ ಹೇಳುತ್ತಾನೆ. "ನನ್ನ ಮೇಲಧಿಕಾರಿ ನನಗೆ ಸಹಾಯ ಒದಗಿಸಲು ಏನಾದರೂ ಮಾಡಲು ಸಿದ್ಧನಿದ್ದರೆ, ನಾನು ಮುಂದಿನ ವರ್ಷ ನನ್ನ ಸಾಧನೆ ಉತ್ತಮವಾಗಲು ಏನು ಬೇಕೊ ಅದನ್ನ ಮಾಡಲು ಸಿದ್ಧನಿದ್ದೇನೆ.''

ಈ ತರಹದ ಒಂದು ಭಾವನೆ, ಆದರಲ್ಲೂ ಅದು ವ್ಯಕ್ತಿಯ ಅಭಿವೃದ್ಧಿಯೊಡನೆ ಜೋಡಿಸಲ್ಪಟ್ಟಾಗ, ಯಾವುದು ಸಾಧನಾ ನಿರ್ವಹಣೆಗೆ ಅಡಿಪಾಯವಾಗುತ್ತದೊ ಅದು ಒಂದು ಪ್ರೇರಣೆಯ ಅರಿವನ್ನು ಸೃಷ್ಟಿಸುತ್ತದೆ. ಆದ್ದರಿಂದ ನಾನು ಹೇಳುತ್ತೇನೆ, ನೀವು ತನ್ನತನದ ಅರಿವು, ಪ್ರಾಮುಖ್ಯದ ಅರಿವು ಮತ್ತು ಅಭಿವೃದ್ಧಿಯ ಅರಿವುಗಳನ್ನು ಸೃಷ್ಟಿಸುವುದರ ಜೊತೆಗೆ, ನಿಮ್ಮ ಕೈಕೆಳಗಿನವರಿಗೆ ಸಂಬಂಧಪಟ್ಟಂತೆ ನಿಮ್ಮ ಪಾತ್ರದಲ್ಲಿ, ಸಾಧನಾ ಸುಧಾರಣೆ (ಉತ್ತಮತೆಯ) ಪದ್ಧತಿಯನ್ನು ಸೃಷ್ಟಿ ಮಾಡಬೇಕು. ಇದು ಅಚ್ಚಾದ ನಮೂನಾಪತ್ರಗಳ ಆಧಾರದ ಮೇಲೇನೂ ಇರಬೇಕಾಗಿಲ್ಲ. ಅದು ವಾಕ್ ರೂಪದಲ್ಲೇ ಇರಬಹುದು. ಆದರೆ ಮೂಲಭೂತವಾಗಿ ಮೇಲಧಿಕಾರಿ ಮತ್ತು ಕೈಕೆಳಗಿನವರು ತಿಂಗಳಿಗೊ, ಮೂರು ತಿಂಗಳಿಗೊ, ಆರು ತಿಂಗಳಿಗೊ ಒಮ್ಮೆ, ಹೇಗೆ ಅನುಕೂಲವೊ ಹಾಗೆ, ಒಟ್ಟಿಗೆ ಕುಳಿತು ನಿರೀಕ್ಷಣೆಯ ಯಾವ ಮಟ್ಟಕ್ಕೆ ಸಾಧನೆಯಾಗಿದೆ, ಅದರಲ್ಲಿ ಎಲ್ಲಿ ಕೊರತೆ ಇದೆ, ಮತ್ತು ಎರಡೂ ಕಡೆಯಿಂದ ಅದರ ಬಗ್ಗೆ ಏನು ಮಾಡಲು ಸಾಧ್ಯವೆಂಬುದನ್ನು ವಿಚಾರಿಸಬೇಕು. ಈ ತರಹದ ಉತ್ತಮ ಪದ್ಧತಿ ಬಂದರೆ, ಸಾಧನೆಯ ನಿರ್ವಹಣೆ ಖಂಡಿತವಾಗಿ ಚೆನ್ನಾಗಿ ನಡೆಯುತ್ತದೆ ಎಂಬ ದೃಢ ಅಭಿಪ್ರಾಯ ನನ್ನದು.

★

# ಗ್ರಾಮೀಣ ಪ್ರದೇಶದ ಬ್ಯಾಂಕ್ ಸಾಲ ವಸೂಲಾತಿ ಸಮಸ್ಯೆ

## ಗ್ರಾಮೀಣ ಬ್ಯಾಂಕಿಂಗಿನ ಬೃಹತ್ತಮ ಸಮಸ್ಯೆಯೆಂದರೆ ವಸೂಲಾಗದ ಸಾಲ. ಇದು ಬೆಳೆದದ್ದು ಹೇಗೆ, ಏಕೆ? ಇದಕ್ಕೇನು ಪರಿಹಾರ?


**ಎಂ. ಎಸ್. ಕೃಷ್ಣಮೂರ್ತಿ**
ಅಗ್ರ ಬ್ಯಾಂಕ್ ಅಧಿಕಾರಿ
ಸ್ಟೇಟ್ ಬ್ಯಾಂಕ್ ಆಫ್ ಮೈಸೂರು
ತುಮಕೂರು


1969ರಲ್ಲಿ ಬ್ಯಾಂಕುಗಳ ರಾಷ್ಟ್ರೀಕರಣ ಆದ ಅನಂತರ ವಾಣಿಜ್ಯ ಬ್ಯಾಂಕುಗಳ ಉದರಿ ನೀತಿಯಲ್ಲಿ ಒಂದು ಹೊಸ ಆಯಾಮ ಸೃಷ್ಟಿಯಾಯಿತು. ಅಲ್ಲಿಯವರೆಗೆ ಕಡೆಗಣಿಸಲ್ಪಟ್ಟಿದ್ದ ಗ್ರಾಮೀಣವಲಯ ಶಾಖೆಗಳ ವಿಸ್ತರಣೆ ಹಾಗೂ ಉದರಿ ನೀಡುವಿಕೆಯಲ್ಲಿ ಆದ್ಯತೆಯನ್ನು ಪಡೆಯಿತು. ಗ್ರಾಮೀಣ ಹಾಗೂ ಅರೆ ನಗರಪ್ರದೇಶದ ವಾಣಿಜ್ಯ ಬ್ಯಾಂಕುಗಳ ಶಾಖೆಗಳು ಜೂನ್ 1969ರಲ್ಲಿ 5,175 ಇದ್ದದ್ದು ಜೂನ್ 1987ರ ಹೊತ್ತಿಗೆ 40,714ನ್ನು ಮುಟ್ಟಿತು. 1969ರಲ್ಲಿ ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳ ಆದ್ಯತಾವಲಯದ ಸಾಲ ರೂ. 441 ಕೋಟಿಯಿಂದ ಜೂನ್ 1987ರ ಹೊತ್ತಿಗೆ ರೂ. 25,406 ಕೋಟಿ ತಲುಪಿತು. ಅಂದರೆ ಶೇ. 15ರ ಒಟ್ಟು ಸಾಲದಿಂದ ಶೇ. 45ರ ವರೆಗೆ ಮುಟ್ಟಿತು. ಅಂತೆಯೇ ಗ್ರಾಮೀಣ ಬಡಜನತೆಗೆ ಕೊಟ್ಟ ಸಾಲ ರೂ. 6,353 ಕೋಟಿ ಆಗಿತ್ತು. ಇದು ಒಟ್ಟು ಸಾಲದ ಶೇ. 11.2ರಷ್ಟು. ವ್ಯವಸಾಯಕ್ಕೆ ಕೊಟ್ಟ ಸಾಲ ರೂ. 15,235 ಕೋಟಿ. ಅಂದರೆ ಬ್ಯಾಂಕುಗಳು ಗ್ರಾಮೀಣ ಪ್ರದೇಶಗಳಲ್ಲಿ ಸಾಲ ನೀಡುವ ಚಟುವಟಿಕೆಯಲ್ಲಿ ಎಷ್ಟು ಪ್ರಗತಿಯನ್ನು ಸಾಧಿಸಿವೆ ಎಂಬುದನ್ನು ತಿಳಿಯಬಹುದು. ಆದರೆ ಸಾಲದ ವಸೂಲಾತಿಯನ್ನು ಗಮನಿಸಿದಾಗ ಅದರ ವೇಗ ಸಾಲ ನೀಡಿದ ವೇಗದಲ್ಲಿ, ಕೆಲವೊಮ್ಮೆ ಶೇ. 25ರಷ್ಟೂ ಇರದೆ ವರ್ಷೇವರ್ಷೇ ಸಾಲದ ಬಾಕಿ ಏರುತ್ತಲೇ ಇರುವುದು ಗಮನಕ್ಕೆ ಬರುತ್ತದೆ. ಇತ್ತೀಚಿನ ದಿನಗಳಲ್ಲಂತೂ ಬ್ಯಾಂಕುಗಳು ಸರ್ಕಾರದ ಒತ್ತಡದಿಂದಾಗಿ ತಮಗೆ ವಿಧಿಸಿರುವ ಗುರಿಯನ್ನು ತಲುಪುವ ಒಂದೇ ಉದ್ದೇಶದಿಂದ ಸಾಲವನ್ನು ಕೊಡುತ್ತವೆಯೇ ಹೊರತು ಸಾಲದ ಗುಣಮಟ್ಟವನ್ನು ಸಾಧಿಸುವುದರಲ್ಲಿ ಯಶಸ್ವಿಯಾಗಿಲ್ಲ. ಸಾಲದ ಯೋಜನೆಗಳ ಯಶಸ್ಸಿಗೆ ಬೇಕಾದ ಅಧೋರಚನೆ ಇಲ್ಲದಿರುವುದು ಆ ಸಾಲಗಳ ವಸೂಲಾತಿಯಲ್ಲಿ ಗುರಿಯನ್ನು ತಲುಪಲು ಆಗದೆ ಇರುವುದಕ್ಕೆ ಇರುವ ಒಂದು ಮುಖ್ಯ ಕಾರಣ. ಸಾಲದ ವಸೂಲಾತಿಯಲ್ಲಿ ನಿಗದಿತ ಪ್ರಮಾಣದ ಗುರಿಯನ್ನು ತಲುಪದೆ ಇರುವ ಬ್ಯಾಂಕುಗಳಿಗೆ ರಾಷ್ಟ್ರೀಯ ಕೃಷಿ ಮತ್ತು ಗ್ರಾಮೀಣ ಬ್ಯಾಂಕಿನಿಂದ ಪುನರ್ಧನ ಸೌಲಭ್ಯ ದೊರಕದೆ ಬ್ಯಾಂಕುಗಳ ಬಂಡವಾಳದ ಮರು ಚಾಲನೆ ಆಗದೆ ಅಭಿವೃದ್ಧಿಯ ಕಾರ್ಯಕ್ರಮಗಳು ಸ್ಥಗಿತಗೊಳ್ಳುವ ಕುರುಹುಗಳು ಕಾಣಬರುತ್ತಿವೆ. ಇಂತಹ ಗಂಡಾಂತರ ಪರಿಸ್ಥಿತಿಯ ಅರಿವು ಈಗ ನಮ್ಮೆಲ್ಲರಿಗೂ ಆಗಬೇಕು ಮತ್ತು ಇದಕ್ಕೆ ಕಾರಣಗಳನ್ನು ಅರಿತು ಸೂಕ್ತವಾದ ಪರಿಹಾರವನ್ನು ಕಂಡುಕೊಳ್ಳಬೇಕಾಗಿದೆ.

### ಕಾರಣಗಳು

ಬ್ಯಾಂಕುಗಳ ಸಾಲ ವಸೂಲಾತಿಯಲ್ಲಿ ಆಗುತ್ತಿರುವ ತೊಂದರೆಗಳಿಗೆ ಈ ಕಾರಣಗಳನ್ನು ಕೊಡಬಹುದು: ಉದ್ದೇಶಪೂರ್ವಕ ಸುಸ್ತಿದಾರ, ಪರಿಸ್ಥಿತಿಯ ಒತ್ತಡದಿಂದ ಆದ ಸುಸ್ತಿದಾರ, ಸಾಲಗಾರನ ಪ್ರಾಮಾಣಿಕತೆಯ ಕೊರತೆ, ಆತನ ನಡತೆ ಹಾಗೂ ಆತನ ಸಹಚರರ ದುರ್ಬೋಧನೆ—ಸಾಲವನ್ನು ತೀರಿಸಬೇಕಿಲ್ಲವೆಂದು ರಾಜಕೀಯ ಪುಢಾರಿಗಳಿಂದ ತಪ್ಪು ಬೋಧನೆ—ಇತ್ಯಾದಿ ಕಾರಣಗಳಿಂದ ಕೆಲವರು ಉದ್ದೇಶಪೂರ್ವಕವಾಗಿಯೇ ಸುಸ್ತಿದಾರರಾಗುತ್ತಾರೆ. ಪರಿಸ್ಥಿತಿಯ ಒತ್ತಡದಿಂದಲೂ ಸಾಲಗಾರ ಸುಸ್ತಿದಾರನಾಗಬಹುದು. ಸಾಲಗಾರ ಕೈಗೊಂಡ ಯೋಜನೆಗಳು ಹಲವಾರು ಕಾರಣಗಳಿಂದ ಪೂರ್ಣಗೊಳ್ಳದೆ ಇರುವುದು, ಕುಟುಂಬದ ಸದಸ್ಯರ ಹಠಾತ್ ನಿಧನ ಅಥವಾ ಕಾಯಿಲೆ, ಯೋಜನೆಯಿಂದ ಪಡೆದ ಆಸ್ತಿಯ ನಾಶ ಇವುಗಳಿಂದ ಆತ ಸುಸ್ತಿದಾರನಾಗಬಹುದು. ಪ್ರಕೃತಿಯ ಪ್ರಕೋಪದಿಂದ, ಅಂದರೆ ಬರ ಅಥವಾ ಪ್ರವಾಹ

ಗಳಿಂದ ಆಗುವ ನಷ್ಟದಿಂದಲೂ ಆತ ಸುಸ್ತಿದಾರನಾಗಬಹುದು.

ಸಾಲ ಕೊಡುವ ಬ್ಯಾಂಕುಗಳ ವಿಳಂಬನೀತಿಯೂ ಸುಸ್ತಿಗೆ ಕಾರಣವಾಗಬಹುದು. ಸಾಲಗಾರನಿಗೆ ಆತನ ಯೋಜನೆಗೆ ತಕ್ಕಷ್ಟು ಸಾಲವನ್ನು ಕೊಡದೆ ಇರುವುದರಿಂದ ಯೋಜನೆಗಳು ಕುಂಠಿತವಾಗಿ ಉತ್ಪಾದನೆ ಕುಂಠಿತವಾಗಬಹುದು. ಸಾಲ ವಸೂಲಾತಿ ಸಾಧ್ಯವಾಗದಿರಬಹುದು. ಬ್ಯಾಂಕುಗಳ ಆಡಳಿತ ಯಂತ್ರದ ಅಸಮರ್ಪಕತೆಯಿಂದಾಗಿ ಸಾಲದ ವಸೂಲಾತಿ ಹಿಂದೆ ಬೀಳಬಹುದು. ಸಾಲದ ವಸೂಲಾತಿ ನಿಯಮಗಳಲ್ಲಿ ಇರುವ ನ್ಯೂನತೆಗಳು, ಸಾಲದ ವಸೂಲಾತಿಗೆ ಗಮನ ಕೊಡದೆ ಕೇವಲ ಸಾಲವನ್ನು ಕೊಡುವಲ್ಲಿ ಸರ್ಕಾರದ ವಿವಿಧ ಅಭಿವೃದ್ಧಿ ಸಂಸ್ಥೆಗಳ ಕಾಳಜಿ. ಬ್ಯಾಂಕುಗಳ ಸಾಲ ವಸೂಲಾತಿಗೆ ಸರ್ಕಾರದ ವಿಳಂಬ ನೀತಿ—ಕಾನೂನಿನ ಜಡತೆ, ಸಾಲದ ವಸೂಲಾತಿಗೆಂದೇ ಇರುವ ರಾಜ್ಯದ ಶಾಸನಗಳ ನಿಷ್ಪ್ರಯೋಜಕತೆ — ಇವುಗಳಿಂದಾಗಿಯೂ ವಸೂಲಾತಿ ಹಿಂದೆ ಬಿದ್ದಿದೆ.

## ಬ್ಯಾಂಕುಗಳ ವಿಳಂಬ ನೀತಿ

ಸಾಲಗಾರನಿಗೆ ಸಾಧ್ಯವಾದಷ್ಟು ಜಾಗ್ರತೆ ಸಾಲವನ್ನು ಒದಗಿಸದೆ ಆತನನ್ನು ಪದೇಪದೇ ಅಲೆದಾಡಿಸುವುದರಿಂದಾಗಿ ಸಾಲಗಾರನಿಗೆ ಬ್ಯಾಂಕಿನ ಮೇಲೆ ಒಂದು ರೀತಿಯ ರೊಚ್ಚು ಹಿಡಿದು ಸಾಲದ ವಸೂಲಾತಿಗೆ ಬರುವ ಬ್ಯಾಂಕಿನ ಅಧಿಕಾರಿಗಳನ್ನು ಅಲೆಸುವ ಪ್ರವೃತ್ತಿಯನ್ನು ಆವನು ಹೊಂದುತ್ತಾನೆ.

ಬ್ಯಾಂಕುಗಳು ಸಾಲಗಾರನಿಗೆ ಆವಶ್ಯಕತೆ ಇರುವ ಸಂದರ್ಭದಲ್ಲಿ ಮತ್ತು ಆತನ ಯೋಜನೆಯ ಅಗತ್ಯದಷ್ಟು ಸಾಲವನ್ನು ಕೊಡದೆ ಚೌಕಾಸಿ ಮಾಡಿದಾಗ ಕೊಟ್ಟ ಸಾಲ ದುರುಪಯೋಗವಾಗಬಹುದು. ವ್ಯವಸಾಯಕ್ಕಾಗಿ ಸಾಲ ನೀಡುವಾಗ ಬ್ಯಾಂಕುಗಳು ರೈತನಿಗೆ ಸರಿಯಾದ ಕಾಲದಲ್ಲಿ ಸಾಲ ವಿತರಣೆ ಮಾಡದಿದ್ದಲ್ಲಿ ರೈತನ ವ್ಯವಸಾಯ ಹಳಿ ತಪ್ಪಿದ ರೈಲಿನಂತಾಗುತ್ತದೆ.

ಸಾಲಗಾರ ಬ್ಯಾಂಕಿಗೆ ಒದಗಿಸಬೇಕಾದ ದರಖಾಸ್ತುಗಳನ್ನು ಪಡೆಯಲು ಅವನು ಪಡುವ ಬವಣೆ ಹಾಗೂ ಹಣದ ಖರ್ಚು ಅವನನ್ನು ಅಸ್ಥಿರನನ್ನಾಗಿ ಮಾಡುತ್ತದೆ.

ವ್ಯವಸಾಯ ಸಾಲಗಾರನಂತೂ ಆತನ ದಿನಚರಿಯ ವೆಚ್ಚವನ್ನೂ ಕೆಲವೊಮ್ಮೆ ಸಾಲದ ಹಣದಲ್ಲೇ ಪೂರೈಸಬೇಕಾಗುವುದರಿಂದ ಅಂತಹ ಸಾಲವನ್ನು ಕೊಡುವಾಗ ಬ್ಯಾಂಕುಗಳು ರೈತನ ದೈನಂದಿನ ವೆಚ್ಚದ ಒಂದು ಭಾಗವನ್ನೂ ಸಾಲದ ರೂಪದಲ್ಲಿ ಕೊಡದೇ ಇರುವುದರಿಂದ ಆತ ತೆಗೆದುಕೊಂಡ ಸಾಲದಲ್ಲಿ ಸ್ವಲ್ಪ ಭಾಗ ಮಾತ್ರ ಸದುಪಯೋಗವಾಗಿ ಆತ ನಿರೀಕ್ಷಿಸಿದ ಫಲ ದೊರೆಯದೆ ಅವನು ಬ್ಯಾಂಕಿನ ಸಾಲಕ್ಕೆ ಸುಸ್ತಿದಾರನಾಗುತ್ತಾನೆ.

## ಆಡಳಿತ ಯಂತ್ರದ ಕೊರತೆ

ಬ್ಯಾಂಕುಗಳು ನೀಡಿದ ಸಾಲದ ಲೆಕ್ಕಗಳನ್ನು ಆಗ್ಗಾಗ್ಗೆ ಪರಿಶೀಲನೆ ಮಾಡುತ್ತಾ, ಸಮಯಾನುಸಾರ ಬಡ್ಡಿಗಳನ್ನು ಲೆಕ್ಕಗಳಿಗೆ ಹಚ್ಚುತ್ತಾ ಸಾಲದ ರೆಕಾರ್ಡುಗಳನ್ನು ಅವಧಿ ವಾಯಿದೆ ಮೀರದಂತೆ ಕಾಪಾಡಿಕೊಂಡು ಸಾಲಗಾರನನ್ನು ಆಗಾಗ್ಗೆ ಭೇಟಿ ಮಾಡಿ ವಸೂಲಾತಿಗೆ ತೊಡಗಲು ಸಾಕಷ್ಟು ಸಿಬ್ಬಂದಿ ಇಲ್ಲದೇ ಇರುವುದು ಸುಸ್ತಿಗೆ ಕಾರಣವಾಗಿದೆ. ಸಾಮಾನ್ಯವಾಗಿ ಸುಮಾರು 500 ಸಾಲದ ಖಾತೆಗಳನ್ನು ನೋಡಿಕೊಳ್ಳಲು ಒಬ್ಬ ಕ್ಷೇತ್ರಾಧಿಕಾರಿಯ ಆವಶ್ಯಕತೆ ಇರುತ್ತದೆ. ಆದರೆ ಕೆಲವು ಶಾಖೆಗಳಲ್ಲಿ ಸುಮಾರು 5,000 ದಿಂದ 8,000 ಸಾಲದ ಖಾತೆಗಳಿದ್ದು ಕೇವಲ ಒಬ್ಬಿಬ್ಬರು ಕ್ಷೇತ್ರಾಧಿಕಾರಿಗಳು ಇರುವರು. ಅಂದ ಬಳಿಕ ಅವರು ಎಷ್ಟರ ಮಟ್ಟಿಗೆ ಸಾಲ ವಸೂಲಾತಿ ಮಾಡಬಲ್ಲರು? ಸಾಲದ ಸಿಬ್ಬಂದಿ ಸಾಲದ ವಸೂಲಾತಿಗೆ ಹೋಗದಿದ್ದಲ್ಲಿ ಸಾಲಗಾರನೇ ಸ್ವತಃ ಬ್ಯಾಂಕಿಗೆ ಬಂದು ತನ್ನ ಸಾಲವನ್ನು ಕಟ್ಟುವ ಪ್ರಾಮಾಣಿಕತೆ ಕಂಡು ಬರುತ್ತಿಲ್ಲ. ಇನ್ನು ಕೆಲವು ಸಂದರ್ಭಗಳಲ್ಲಿ ಸಿಬ್ಬಂದಿಯವರು ಸಾಕಷ್ಟಿಲ್ಲದ ಶಾಖೆಗಳಲ್ಲಿ ಸಾಲವನ್ನು ಕಟ್ಟಲು ಬರುವ ಸಾಲಗಾರನಿಗೆ ಮಾರ್ಗದರ್ಶನ ನೀಡುವ ಮತ್ತು ಅವನ ಕೆಲಸ ಮಾಡಿಕೊಡುವ ಸೌಹಾರ್ದ ಮನೋಭಾವ ತಳೆದಿರುವುದಿಲ್ಲ. ಮತ್ತೆ ಕೆಲವು ಶಾಖೆಗಳು ಕೊಟ್ಟಿರುವ ಸಾಲಗಳು ನೂರಿನ್ನೂರು ಕಿ.ಮೀ. ದೂರದವರೆಗೆ ಹರಡಿ ಸುಲಭವಾಗಿ ಸಾಲಗಾರನನ್ನು ಆಗಿಂದಾಗ್ಗೆ ಭೇಟಿಯಾಗಲೂ ಸಾಧ್ಯವಾಗದಂತೆ ಇರುತ್ತದೆ. ಇಂತಹ ಸಾಲಗಳ ವಸೂಲಾತಿಗೆ ವಾಹನಗಳು ಆವಶ್ಯಕ. ಸಾಲಗಳ ವಸೂಲಾತಿಗೆ ತಗಲುವ ವೆಚ್ಚ ಅಧಿಕವಾಗಿರುತ್ತದೆ.

## ವಸೂಲಾತಿ ನಿಯಮಗಳ ನ್ಯೂನತೆಗಳು

ಸಹಕಾರಿ ಸಂಘಗಳ ಸಾಲದ ವಸೂಲಾತಿಗಾಗಲಿ ರಾಜ್ಯದ ಹಣಕಾಸು ಸಂಸ್ಥೆಗಳ ಸಾಲದ ವಸೂಲಾತಿಗಾಗಲಿ ಇರುವ ಕಾನೂನಿನ ಸಹಾಯ ಹಾಗೂ ಬಲ ಬ್ಯಾಂಕ್ ಸಾಲಗಳಿಗೆ ಇಲ್ಲದೆ ಇರುವುದು ಮತ್ತೊಂದು ದುರದೃಷ್ಟಕರ ಸಂಗತಿ. ಬ್ಯಾಂಕ್ ಸಾಲಗಾರನ ಮೇಲೆ ಕಾನೂನು ಕ್ರಮ ತೆಗೆದುಕೊಳ್ಳಲು ನಿರ್ಧರಿಸುವುದೇ ಬಹಳ ನಿಧಾನ. ಅಷ್ಟು ಹೊತ್ತಿಗೆ ಸಾಲಗಾರನನ್ನು ಜೀವಸಹಿತ ಹುಡುಕುವುದೇ ಕೆಲವೊಮ್ಮೆ ಕಷ್ಟಕರವಾಗಿರುತ್ತದೆ. ಸಾಲಗಾರನ ಮೇಲೆ ನೋಟೀಸು ಜಾರಿಮಾಡಿ ಆತನಿಗೆ ಸಾಕಷ್ಟು ಕಾಲವನ್ನು ಕೊಟ್ಟು ಕಟ್ಟಕಡೆಯದಾಗಿ ಕಾನೂನಿನ ಮೊರೆಹೊಗಬೇಕಾಗುತ್ತದೆ.

**ರಾಜಕೀಯ ಉದ್ದೇಶ:** ರಾಜಕೀಯ ವ್ಯಕ್ತಿಗಳು ತಮ್ಮ ಬೇಳೆಕಾಳನ್ನು ಬೇಯಿಸಿಕೊಳ್ಳಲು ಅಂದರೆ ಚುನಾವಣೆಗಳಲ್ಲಿ ತಮಗೆ ಅತ್ಯಧಿಕ ಮತಗಳನ್ನು ಗಳಿಸಿಕೊಳ್ಳಲು ಬ್ಯಾಂಕಿನ ಸಾಲಗಳನ್ನು ಸಾಲಗಾರನು ಕಟ್ಟುವಂತಿಲ್ಲವೆಂದೂ ಅದು ಸರ್ಕಾರದಿಂದ ಆತನಿಗೆ ಕೊಟ್ಟಿರುವ ಪರಿಹಾರವೆಂದೂ ಹೇಳಿ ಕಟ್ಟಬೇಕೆಂದಿರುವ ಸಾಲಗಾರನನ್ನು ಅಪ್ರಾಮಾಣಿಕನನ್ನಾಗಿ ಮಾಡುತ್ತಾರೆ.

**ಕಾನೂನಿನ ಜಡತೆ:** ಬ್ಯಾಂಕ್ ಸಾಲಗಳನ್ನು ದುರುಪಯೋಗ ಮಾಡಿಕೊಂಡಿರುವ ಸಾಲಗಾರನನ್ನು ನಂಬಿಕೆ ದ್ರೋಹದ ಮೇಲೆ ಬಂಧಿಸಲು ಕಾನೂನಿನ ಕೊರತೆಯೇ ಸಾಲಗಾರನನ್ನು ಅಪ್ರಾಮಾಣಿಕನನ್ನಾಗಿಸುವ ಮತ್ತೊಂದು ಕಾರಣ. ಸಾಲದ ವಸೂಲಾತಿಗೆ ಕೋರ್ಟಿನಲ್ಲಿ ದಾವೆ ಹಾಕಿದಾಗ ಅದು ಇತ್ಯರ್ಥವಾಗುವ ಹೊತ್ತಿಗೆ ಹಲವಾರು ವರ್ಷಗಳೇ ಸಂದಿರುತ್ತವೆ. ದಾವೆಯ ಹಣಕ್ಕೋಸ್ಕರ ಸಾಲಗಾರನ ಆಸ್ತಿಯನ್ನು ಹರಾಜು ಹಾಕಲು ಪ್ರಯತ್ನಿಸಿದರೆ ಆ ಊರಿನಲ್ಲಿ ಅದನ್ನು ಕೊಳ್ಳಲು ಜನಗಳೇ ಇರುವುದಿಲ್ಲ.

## ರಾಜ್ಯದ ಕಾನೂನುಗಳ ನಿಷ್ಪ್ರಯೋಜಕತೆ

1974ರ ಕರ್ನಾಟಕ ವ್ಯವಸಾಯ ಉದರಿ ಹಾಗೂ ಇತರ ಉಪಬಂಧಗಳ ಅಧಿನಿಯಮ ಹಾಗೂ 1984ರ ಸಾರ್ವಜನಿಕ ಹಣದ ವಸೂಲಾತಿ ಅಧಿನಿಯಮಗಳು, ಬ್ಯಾಂಕುಗಳ ಸಾಲದ ವಸೂಲಾತಿಯನ್ನು ಶೀಘ್ರಗೊಳಿಸಲೆಂದೂ ಸಾಲಗಾರನಿಗೆ ಕೋರ್ಟಿನ ಖರ್ಚು ಕಡಿಮೆಯಾಗುವಂತೆಮಾಡಲೂ ಹುಟ್ಟಿಕೊಂಡ ಎರಡು ಕಾನೂನುಗಳು ಮೊದಲನೆಯ ಕಾನೂನಿನ ಪ್ರಕಾರ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ಜಿಲ್ಲಾಧಿಕಾರಿಗಳು ಸಂಬಂಧಪಟ್ಟ ಅಧಿಕಾರಿಗಳು. ಈ ಅಧಿಕಾರಿಗಳು ಮೇಲ್ಕಂಡ ಸಾಲದ ಕಾನೂನು ಪ್ರಕಾರ ಬ್ಯಾಂಕುಗಳಿಗೆ ಸಾಲದ ವಸೂಲಾತಿ ಪತ್ರಗಳನ್ನು ನೀಡುವ ಅರ್ಹತೆ ಹೊಂದಿರುತ್ತಾರೆ. ತದನಂತರ ಸಾಲದ ವಸೂಲಾತಿ ಪತ್ರಗಳ ಮೂಲಕ ಸಾಲಗಾರನ ಆಸ್ತಿಗಳನ್ನು ಹರಾಜುಮಾಡಿ ಸಾಲವನ್ನು ತೀರಿಸಿಕೊಳ್ಳಬಹುದು. ಆದರೆ ಸಂಬಂಧಪಟ್ಟ ಅಧಿಕಾರಿಗಳ ಅಜ್ಞಾನ ಅಥವಾ ಜಡತೆಯ ಕಾರಣದಿಂದಾಗಿ ಈ ಎರಡೂ ಕಾನೂನುಗಳು ಕೇವಲ ಕಾನೂನಗಳಾಗೇ ಉಳಿದು ಯಾವ ಪ್ರಯೋಜನವನ್ನೂ ನೀಡಿಲ್ಲ. ಈ ಶಾಸನಗಳ ಪ್ರಕಾರ ಸಾಲದ ಮೊತ್ತದಲ್ಲಿ ಅರ್ಧಭಾಗವನ್ನು ಕಂದಾಯ ವಸೂಲಾತಿಯ ಬಾಕಿ ಎಂದು ಪರಿಗ್ರಹಿಸಿ, ಸಂಬಂಧಪಟ್ಟ ತಹಸೀಲ್ದಾರರು ಕ್ರಮ ತೆಗೆದುಕೊಳ್ಳಬೇಕು. ಆದರೆ ಯಾವ ಕ್ರಮವೂ ಜರುಗುತ್ತಿಲ್ಲ.

## ಕೆಲವು ಸಲಹೆಗಳು

1 ಸಾಲಗಾರನಿಗೆ ಸರಿಯಾದ ಕಾಲಕ್ಕೆ ಸರಿಯಾದ ಮೊತ್ತದ ಸಾಲವನ್ನು ಕೊಡಬೇಕು.

2 ಸಾಲವನ್ನು ಕೊಡುವ ಮುನ್ನ ಹಾಗೂ ಅನಂತರ ಸಾಲಗಾರನನ್ನು ಮತ್ತು ಸಾಲದಿಂದ ಕೊಂಡ ಪದಾರ್ಥಗಳನ್ನು ಪರೀಕ್ಷಿಸಿಕೊಂಡು ಬರುತ್ತಿರಬೇಕು.

3 ಸಾಲಗಾರನಿಗೆ ತಾನು ತೆಗೆದುಕೊಂಡಿರುವುದು ಸಾಲ; ಅದು ಯಾವ ಪರಿಹಾರವೂ ಅಲ್ಲ ಎಂಬುದರ ತಿಳಿವಳಿಕೆ ನೀಡುವುದು ಸೂಕ್ತವಾದದ್ದು.

4 ಗ್ರಾಮಸಭೆಗಳನ್ನು ಮಾಡಿ ಸಾಲ ವಸೂಲಾತಿ ಮೇಳಗಳನ್ನು ಆಗಿಂದಾಗ್ಗೆ ನಡೆಸಿ ಸಾಲವನ್ನು ಸಕಾಲದಲ್ಲಿ ತೀರಿಸಿದ ಪ್ರಾಮಾಣಿಕ ಸಾಲಗಾರನಿಗೆ ಉತ್ತಮವಾದ ಬಹುಮಾನಗಳನ್ನು ಕೊಟ್ಟು ಪ್ರೋತ್ಸಾಹಿಸುವುದರ ಜೊತೆಗೆ ಅಂಥವರಿಂದ ಉಳಿದ ಸಾಲಗಾರರಿಗೆ ತಿಳಿವಳಿಕೆ ಮಾತುಗಳನ್ನು ಹೇಳಿಸಬಹುದು.

5 ಸಾಲಗಾರನಿಗೆ ಬ್ಯಾಂಕಿನಿಂದ ಆಗಾಗ್ಗೆ ತಾಂತ್ರಿಕಸಲಹೆಗಳನ್ನು ಕೊಟ್ಟು ಅತನನ್ನು ಒಳ್ಳೆಯ ಸ್ನೇಹಿತನಂತೆ ಕಾಣಬಹುದು.

6 ಸಾಲಗಾರ ಮರುಪಾವತಿ ಮಾಡಿದಾಗ ಅತಿ ಶೀಘ್ರದಲ್ಲಿ ಆತನಿಗೆ ಮರುಸಾಲವನ್ನು ಒದಗಿಸಿಕೊಡಬೇಕು.

7 ಸಾಲದ ಗುರಿಗಳನ್ನು ಮಾತ್ರ ಹೊಂದಿರುವ ಸರ್ಕಾರದ ಅಭಿವೃದ್ಧಿಸಂಸ್ಥೆಗಳ ಅಧಿಕಾರಿಗಳಿಗೆ ಬ್ಯಾಂಕ್ ಸಾಲದ ವಸೂಲಾತಿಯ ಗುರಿಯನ್ನೂ ಹಾಕಿದಾಗ ಬ್ಯಾಂಕುಕೆಳು ತಮ್ಮ ಸಾಲಗಳ ವಸೂಲಾತಿಯಲ್ಲಿ ಪ್ರಗತಿ ಪಡೆಯಬಹುದು.

8 ತಾಲ್ಲೂಕು ಮಟ್ಟದ ಸಮನ್ವಯ ಸಮಿತಿಯ ಅಡಿಯಲ್ಲಿರುವ ಸಾಲ ವಸೂಲಾತಿ ತಂಡದ ಕಾರ್ಯ ಚಟುವಟಿಕೆಯ ತಪಾಸಣೆ ಮತ್ತು ಅವರ ಕಾರ್ಯ ಚಟುವಟಿಕೆಗೆ ಜಿಲ್ಲಾಧಿಕಾರಿಯ ಅಥವಾ ಜಿಲ್ಲಾ ಪರಿಷತ್ತಿನ ಮುಖ್ಯ ಕಾರ್ಯದರ್ಶಿಯವರಿಂದ ಕ್ರಮ.

9 ಒಟ್ಟಿನಲ್ಲಿ ಸಾಲಗಾರ ತಾನು ತೆಗೆದುಕೊಂಡ ಸಾಲ ಬ್ಯಾಂಕಿನ ಕೇವಣಿಯಲ್ಲ; ಅದು ಯಾವತ್ತಿದ್ದರೂ ತೀರಿಸಲೇಬೇಕಾದ್ದು ಎಂದು ತಿಳಿದು ಪ್ರಾಮಾಣಿಕ ತೀರುವಳಿಗೆ ಆತನನ್ನು ತಯಾರುಮಾಡಬೇಕಾದ್ದು ಬ್ಯಾಂಕಿನ ಹೊಣೆಯಾಗಿದೆ.

ಈಚೆಗೆ ಜಾರಿಗೆ ಬಂದಿರುವ ರಿಸರ್ವ್ ಬ್ಯಾಂಕಿನ ಸೇವಾಕ್ಷೇತ್ರ ಯೋಜನೆಯಿಂದ ಬ್ಯಾಂಕುಗಳ ಸಾಲ ವಸೂಲಾತಿಯಲ್ಲಿ ಗ್ರಾಮೀಣ ಪ್ರದೇಶಗಳ ಹಲವಾರು ತೊಂದರೆಗಳು ನಿವಾರಣೆಯಾಗಿ ವಸೂಲಾತಿಯಲ್ಲಿ ಬಹಳಷ್ಟು ಪ್ರಗತಿ ಕಂಡುಬರಬಹುದೆಂದು ಆಶಿಸಬಹುದಾಗಿದೆ. ★

---

# ಆಜೀವ ಚಂದಾದಾರರ ಪಟ್ಟಿ

**(ಹಿಂದಿನ ಸಂಚಿಕೆಯಿಂದ ಮುಂದುವರಿದುದು)**

೭೯೭ ಟೀಚರ್ಸ್ ಕೋ-ಆಪರೇಟಿವ್ ಬ್ಯಾಂಕ್ ಲಿ.
ಪ್ರಧಾನ ಕಛೇರಿ
ಡಾ॥ ಯು. ಆರ್. ರಾವ್
ವಾಣಿಜ್ಯ ಸಂಕೀರ್ಣ, ಉಡುಪಿ ೫೭೬೧೦೧

೭೯೮ ಶ್ರೀ ಶಿವಯೋಗಿ ಮುರುಘೇಂದ್ರ ಸ್ವಾಮಿ
ಅರ್ಬನ್ ಕೋ.-ಆಪ್. ಬ್ಯಾಂಕ್ ಲಿ.
ಅಥಣಿ ೫೯೧೩೦೪

೭೯೯ ಎಲ್.ಐ.ಸಿ. ಎಂಪ್ಲಾಯೀಸ್
ಕೋ-ಆಪರೇಟಿವ್ ಬ್ಯಾಂಕ್ ಲಿ.
ಲಿಕೊ ಬ್ಯಾಂಕ್ ರಸ್ತೆ
ಉಡುಪಿ ೫೭೬ ೧೦೧

೮೦೦ ಶ್ರೀ ಡಿ. ಸಿ. ನಟರಾಜ
ಭಾರತೀಯ ಸ್ಟೇಟ್ ಬ್ಯಾಂಕ್
ಲಾಲಬಾಗ್ ಶಾಖೆ
ಮಂಗಳೂರು ೫೭೫ ೦೦೩

೮೦೧ ಶ್ರೀ ಬಾಲರಂಗಸ್ವಾಮಿ
ಭಾರತೀಯ ಸ್ಟೇಟ್ ಬ್ಯಾಂಕ್
ಕೃಷಿ ಅಭಿವೃದ್ಧಿ ಶಾಖೆ
ರಾಣೆಬೆನ್ನೂರು

೮೦೨ ಶ್ರೀ ಎಂ. ವಿ. ಆನಂದರಾವ್
ಮೈಸೂರು ಬ್ಯಾಂಕ್—ಪ್ರದೇಶ-೪
ವಲಯ ಕಛೇರಿ
ಕುವೆಂಪು ನಗರ, ಮೈಸೂರು ೫೭೦ ೦೨೩

೩೮೦ ಟಿ. ಶ್ರೀ ಸುಂದರ ಮೂರ್ತಿ
೮೩೭/೧, ೧೨ನೇ ತಿರುವು, ಪಶ್ಚಿಮ
ರಾಮಾನುಜ ರಸ್ತೆ
ಮೈಸೂರು ೫೭೦ ೦೦೪

೮೦೪ ಶ್ರೀ ಎಸ್. ವೆಂಕಟೇಶ್
೨೬೫, ಲಕ್ಷ್ಮೀವಿಲಾಸ ರಸ್ತೆ
ಮೈಸೂರು ೫೭೦ ೦೦೪

೮೦೫ ಶ್ರೀ ಜಿ. ಭುಜಂಗ ಶೆಟ್ಟಿ
ಮೈಸೂರು ಬ್ಯಾಂಕು
ವಲಯ ಕಛೇರಿ, ಕುವೆಂಪು ನಗರ
ಮೈಸೂರು ೫೭೦ ೦೨೩

೮೦೬ ಶ್ರೀ ಕೆ. ಆರ್ ಪ್ರಸಾದ್
೨೦/೨, ಮೂರನೇ ಮುಖ್ಯ ರಸ್ತೆ
೯ನೇ ತಿರುವು, ಜಯನಗರ
ಮೈಸೂರು ೫೭೦ ೦೧೪

೮೦೭ ಶ್ರೀ ಆರ್. ಬದರಿ ನಾರಾಯಣ
೧೪೫, ಎಸ್.ಬಿ.ಎಂ. ಕಾಲನಿ
ಬನಶಂಕರಿ, ೧ನೇ ಘಟ್ಟ
ಬೆಂಗಳೂರು ೫೬೦ ೦೫೦

೮೦೮ ಶ್ರೀ ವಿ. ವೆಂಕಟೇಶ್
೩೮೫, ಮೂರನೆ ಮುಖ್ಯ ರಸ್ತೆ
ಸರಸ್ವತಿಪುರಂ
ಮೈಸೂರು ೫೭೦ ೦೦೯

೮೦೯ ಶ್ರೀಮತಿ ಎಚ್. ಎಸ್. ಅನ್ನಪೂರ್ಣ
ಭಾರತೀಯ ಸ್ಟೇಟ್ ಬ್ಯಾಂಕ್
ಸಣ್ಣ ಕೈಗಾರಿಕಾ ಶಾಖೆ
ಮೈಸೂರು ೫೭೦ ೦೨೦

೮೧೦ ಹೆಚ್. ಎನ್. ಸುಭಾಷ್
ಭಾರತೀಯ ಸ್ಟೇಟ್ ಬ್ಯಾಂಕ್
ಬೆಂಗಳೂರು ನಗರ ಶಾಖೆ

೮೧೧ ಶ್ರೀ ರಂಗರಾಜನ್
ಭಾರತೀಯ ಸ್ಟೇಟ್ ಬ್ಯಾಂಕ್
ಬೆಂಗಳೂರು ನಗರ ಶಾಖೆ

೮೧೨ ಸತೀಶ ತುಂಗ
ಭಾರತೀಯ ಸ್ಟೇಟ್ ಬ್ಯಾಂಕ್
ಬೆಂಗಳೂರು ನಗರ ಶಾಖೆ

೮೧೩ ಕೆ. ಎನ್. ಮಂಜುನಾಥ್
ಭಾರತೀಯ ಸ್ಟೇಟ್ ಬ್ಯಾಂಕ್
ಬೆಂಗಳೂರು ನಗರ ಶಾಖೆ

೮೧೪ ಬಿ. ಆರ್. ಮಂಜುನಾಥ್
ಭಾರತೀಯ ಸ್ಟೇಟ್ ಬ್ಯಾಂಕ್
ಬೆಂಗಳೂರು ನಗರ ಶಾಖೆ

೮೧೫ ರಾಘವೇಂದ್ರ ಕುಮಾರ್
ಭಾರತೀಯ ಸ್ಟೇಟ್ ಬ್ಯಾಂಕ್
ಬೆಂಗಳೂರು ನಗರ ಶಾಖೆ

೮೧೬ ಧನಂಜಯ ಭಂಡಿ
ಭಾರತೀಯ ಸ್ಟೇಟ್ ಬ್ಯಾಂಕ್
ಬೆಂಗಳೂರು ನಗರ ಶಾಖೆ

R. N. 36702/83




# The Splendour of Immortal Classics.

Each a best-seller in its category. Enchanting millions. In India and abroad. Incense sticks with fragrances blended to perfection. In traditional style. Immortal classics. From the house of Aravinda Parimala, of course.



**aravinda parimala works**

Mysore - 570 004 (India)

PRINTED BY G. H. KRISHNAMURTHY, MYSORE PRINTING AND PUBLISHING HOUSE, CLOCK TOWER SQUARE, MYSORE-1